# बृहदारण्यकोपनिषत्

## श्रीराघवेन्द्रतीर्थविरचितखण्डार्थसहिता



सम्पादकः

डा. ए.वि. नागसम्पिगे, एम्.ए., पिहेच्.डि.

प्रकाशनम्

पूर्णप्रज्ञसंशोधनमन्दिरम्

पूर्णप्रज्ञविद्यापीठम्, बेङ्गळूरु - २८

पूर्णप्रज्ञसंशोधनमन्दिरम्
नवदेहलीस्थमानवसंसाधनविकासमन्त्रालयाधीन-
राष्ट्रियसंस्कृतसंस्थानेन सम्मानितम्

# बृहदारण्यकोपनिषत्

## श्रीराघवेन्द्रतीर्थविरचितखण्डार्थसहिता

सम्पादकः
डा. ए.वि. नागसम्पिगे, एम्.ए., पिहेच्.डि.
निदेशकः, पूर्णप्रज्ञसंशोधनमन्दिरम्, बेङ्गळूरु - २८.

प्रकाशनम्
पूर्णप्रज्ञसंशोधनमन्दिरम्
पूर्णप्रज्ञविद्यापीठम्, बेङ्गळूरु - २८.

२००५

पूर्णप्रज्ञसंशोधनमन्दिरग्रन्थमाला - २६

# बृहदारण्यकोपनिषत्

श्रीराघवेन्द्रतीर्थविरचितखण्डार्थसहिता

सम्पादकः –

**डा. ए.वि. नागसम्पिगे,** एम्.ए., पिहेच्.डि.

निर्देशकः, पूर्णप्रज्ञसंशोधनमन्दिरम्, बेङ्गळूरु - २८.

प्रकाशकः –

**पूर्णप्रज्ञसंशोधनमन्दिरम्**

पूर्णप्रज्ञविद्यापीठम्, कत्तरिगुप्पा मेन् रोड्, बेङ्गळूरु - २८.

प्रथममुद्रणम् : २००५

मुद्रितपुस्तकसङ्ख्या : १०००

मूल्यम् : १६० रूप्यकाणि

अक्षरसंयोजनम् : डि.वि. प्रह्लादः

मुद्रणालयः : अनिकेत् एण्टर्प्रैसस्, बेङ्गळूरुनगरम्.

**POORNAPRAJNA SAMSHODHANA MANDIRAM**
Recognised by Rashtriya Sanskrit Samsthan, Deemed University
Ministry of H.R.D., Government of India, New Delhi

# BRIHADARNYAKOPANISHAT
## with
## Khandartha of Sri Raghavendratirtha

Edited by :
**Dr. A.V. Nagasampige,** M.A., Ph.D.
Director
Poornaprajna Samshodhana Mandiram
Bangalore - 28.

Published by :
**Poornaprajna Samshodhana Mandiram**
Poornaprajna Vidyapeetha
Katriguppe Main Road, Bangalore - 28.

**2005**

Poornaprajna Samshodhana Mandiram Series No. 26

# BRIHADARNYAKOPANISHAT
**with Khandartha of Sri Raghavendratirtha**

Editor :
**Dr. A.V. Nagasampige,** M.A., Ph.D.
Director, Poornaprajna Samshodhana Mandiram, Bangalore - 28.

Publisher :
**Poornaprajna Samshodhana Mandiram**
Poornaprajna Vidyapeetha, Bangalore - 28.

| | | |
|---|---|---|
| First Edition | : | 2005 |
| Copies | : | 1000 |
| Price | : | Rs. 160.00 |
| Typeset | : | Prahlad D.V. |
| Printer | : | Aniket Enterprises, Bangalore. |




# अनुग्रहसन्देशः

श्रीमद्राघवेन्द्रतीर्थगुरुसार्वभौमप्रणीतखण्डार्थसमलङ्कृता बृहदारण्यकोपनिषत् पूर्णप्रज्ञसंशोधनमन्दिरेण प्रकाश्यत इति महदिदं नः प्रमोदस्थानम्।

अन्यूनानतिरिक्तपदैरुपनिषदाशयमाविष्कुर्वन्ती भाष्याद्युक्तार्थसङ्ग्रहपटीयसी परकीयव्याख्यानविमर्शनचतुरा गुरुराघवेन्द्रतीर्थीयशैली विद्यार्थिविबुधजनबोधप्रदा मोदप्रदा च। खण्डार्थस्य वैशिष्ट्यमेवमावेदयितुं शक्यते–

१. उपनिषद्गतपदानामौचित्यचिन्तनम्।

२. श्रुतिततीरुपजीव्य निष्पन्नानां सूत्राणामुल्लेखनं व्याख्यानं च।

३. उपनिषत्पदानामन्वयभेदेनापूर्वार्थचिन्तनम्।

४. भाष्ये विस्तृतस्य प्रमेयस्य संक्षेपेण निरूपणम्।

५. भगवत्पादीयग्रन्थान्तरवचनैरापाततः प्रतीयमानविरोधपरिहरणम्।

६. उपनिषद्गतवाक्यविशेषस्य भगवत्पादीयग्रन्थान्तरगतवर्णकान्तरनिरूपणम्।

७. चन्द्रिकाप्राचीनटीकादिगतविशिष्टवाक्यार्थनिरूपणम्।

८. प्रमेयस्पष्टीकरणम्।

९. अप्रतिपत्त्यन्यथाप्रतिपत्त्योः पराकरणम्।

१०. अपव्याख्याननिरसनम्।

स्थालीपुलाकन्यायेन 'न प्रेत्य सञ्ज्ञाऽस्ति' इत्यत्र खण्डार्थस्य विमर्शपद्धतिं विद्वांसः पश्यन्तु–यद्यप्यस्य वाक्यस्यापाततो मुक्तौ चेतनस्य ज्ञानं नास्तीत्यर्थः प्रतीयते । तथाऽपि

नापातप्रतीत एव भवति वाक्यार्थः; किन्तूपक्रमाद्यविरुद्धः युक्तिप्रमाणशुद्धश्च। 'मोहान्तं वचनं मा ब्रूहि' इति मैत्रेय्या विज्ञप्त आह भगवान् याज्ञवल्क्यः 'अविनाशी वा अरे अयमात्माऽनुच्छित्तिधर्मा' इति । अनेन च बौद्धाः (शून्यवादिनः) निरस्ता वेदितव्याः । विस्तारिणः बोधसन्तानस्य निवृत्तिर्मुक्तिरिति किल ते व्याचक्षते। उक्तं हि– 'प्रदीपस्येव निर्वाणं विमोक्षस्तस्य तायिनः' इति । अनेन चात्मनाश एवोक्तो भवति । ज्ञानरूपत्वाद् आत्मनः ज्ञाननाशे किमवशिष्यते। अत आत्मनाशपर्यवसायिनं मोक्षं पराकुर्वन्नाह– 'अविनाशी' इति। आत्मनोऽविनाशित्वेन तद्धर्मभूतज्ञानादीनां तत्स्वरूपत्वेन मुक्तौ नात्मनाशः शक्यते प्रतिपादयितुम्।

एवं तार्किकाः सुखादिविशेषगुणोच्छेदं मुक्तावाचक्षते, तदपि निराह– 'अनुच्छित्तिधर्मा इति' । आत्मस्वरूपभूतानां ज्ञानानन्दादीनां मुक्तावपि अनुच्छेदाभिधानात् तार्किकपक्षो निरस्तः । एवमेव च 'यत्र हि द्वैतमिव भवति' इत्यादिना चैतन्यातिरिक्तपदार्थसत्त्वोपपादनेन मायावादो निरस्तः। तदुक्तं राघवेन्द्रस्वामिभिः–'' 'अविनाशी' इत्यादिना बौद्धाभिमतमोक्षम्, 'अनुच्छित्तिधर्मा' इत्यनेन तार्किकाभिमतं मोक्षम्, 'यत्र हि' इत्यादिनाऽद्वैत्यभिमतं मोक्षं च निरस्यति'' इति।

एवं मितेषु वाक्येष्वमितार्थप्रतिपादकमेनं खण्डार्थं सर्वे विद्वांसोऽधीत्योपनिषदुक्तगुणं च श्रीमन्नारायणमुपास्यानुगृहीता भवन्त्वित्याशास्महे । ग्रन्थस्यास्य समग्रमुद्रणव्ययप्रदानेन श्रीकृष्णसेवां कृतवते श्रीमते एस्. अनन्तनाम्ने अस्मदुपास्यः श्रीकृष्णः सकलविधसम्पत्तिं प्रदाय समनुगृह्णात्विति प्रार्थयामहे। तथैव शोधकर्मणि नियुक्तोऽस्मत्प्रियच्छात्रः नागसम्पिगे इत्युपाह्वः डा. आनन्दतीर्थः सश्रद्धं शोधकर्म कृतवान् । मातृकान्तरसमवलोकनेन शुद्धपाठप्रदानप्रयत्नः तेनात्र विहितः । विस्तृतः विमर्शात्मकश्चोपोद्घातः विलिखितः । भगवान् श्रीकृष्णः ज्ञानाद्यभिवर्धनेनैनमनुगृह्णीयाद् इति प्रार्थयामहे।

श्रीश्रीविश्वेशतीर्थश्रीपादाः
श्रीपेजावरमठाधीशाः, उडुपि.



**Srimati Sondur Sundara Bai & Sri Sondur Venkobachar**

This publication is brought out by the generous financial help of Sri S. Anant, Chartered Accountant, on his father's 80th birthday celebration.

I pray Lord Sri Krishna to bless Sri Anant and his family for noble service rendered by them.

**Sri Vishveshatirtha Swamiji**
**Pejavar Math, Udupi.**

# ಬೃಹದಾರಣ್ಯಕೋಪನಿಷತ್

## ಉಪದೇಶಪರಂಪರೆ

ಶ್ರೀಹರಿಯ ಮಂಗಲಗುಣರೂಪಸಾಕ್ಷಾತ್ಕಾರದಿಂದ ಮೈಮರೆತ ಋಷಿಗಳ ಅನುಭವದ ಮೂಸೆಯಲ್ಲಿ ಅನಾಯಾಸವಾಗಿ ಹೊಮ್ಮಿದ ನುತಿತತಿಗಳೇ ವೇದವೆನಿಸಿವೆ. ಮಾನವ-ಪ್ರಯತ್ನದಿಂದ ಮಾಡಿದ ರಚನೆಯಲ್ಲ ಮತ್ತು ಏಕರೂಪ ಶಾಬ್ದಿಕ ಹಿನ್ನೆಲೆಯಲ್ಲಿ ಇದನ್ನು ಅಪೌರುಷೇಯವೆಂದು ನಂಬಲಾಗಿದೆ.

ಅನಂತ ವೇದರಾಶಿ ಕಾಲಬಲದಿಂದ ನಷ್ಟವಾದಾಗ ದ್ವಾಪರದ ಕೊನೆಯಲ್ಲಿ ಅವತರಿಸಿದ ಭಗವಾನ್ ಬಾದರಾಯಣರು ವೇದಗಳನ್ನು ಸುಜನರಿಗೆ ಕರುಣಿಸಿದರು. ಕೃತಯುಗದಲ್ಲಿ 'ಮೂಲವೇದ'ವೆನಿಸಿ ಅಖಂಡವಾಗಿದ್ದ ಈ ವೇದಗಂಗೆ ತ್ರೇತಾಯುಗದಲ್ಲಿ ಶ್ರೀಹಯಗ್ರೀವ-ರೂಪಿಯಾದ ಭಗವಂತನ ಕರುಣೆಯಿಂದ ಋಕ್-ನಿಗದ-ಸಾಮ ಎಂಬುದಾಗಿ ಮೂರು ಕವಲಾಗಿ ಹರಿಯಿತು. ಇದನ್ನೇ 'ಉಪವೇದ' ಎನ್ನುತ್ತಾರೆ. ಶ್ರೀವ್ಯಾಸರು ಈ ಅಪಾರ ರಾಶಿಯಿಂದ ಮತ್ತೆ ಸ್ವಲ್ಪ ಹೊರತೆಗೆದು ವಿಂಗಡಿಸಿ ಋಕ್-ಯಜುಸ್-ಸಾಮ-ಅಥರ್ವವಾಗಿ ನೀಡಿದರು. ಇದನ್ನೇ 'ಅವಾಂತರ ವೇದ' ಎನ್ನುವರು. ಪುನಃ ಈ ವೇದಭಾಗದ ಅಧ್ಯಯನಪರಂಪರೆ ಮುಂದೆ ಕಾಲ-ಕಲಿಬಲದಿಂದ ನಶಿಸುವ ಅಪಾಯ ಗಮನಿಸಿ ಶಾಖಾಭೇದವನ್ನು ಮಾಡಿ ಕನಿಷ್ಠ ಆಯಾ ಶಾಖೆಯ ಅಧ್ಯಯನವನ್ನಾದರೂ ಮಾಡಲು ಆದೇಶಿಸಿದರು.

ಪ್ರಸಕ್ತ ನೂರೊಂದು ಶಾಖೆಗಳನ್ನು ಒಳಗೊಂಡ ಯಜುರ್ವೇದದಲ್ಲಿ ಐದು ಶಾಖೆಗಳು ಉಳಿದಿದ್ದು ಶುಕ್ಲಯಜುರ್ವೇದದ ಕಾಣ್ವಶಾಖೆಗೆ ಈ ಉಪನಿಷತ್ತು ಸೇರಿದೆ. ಎಂಟು ಅಧ್ಯಾಯಗಳಿರುವ ಈ ಉಪನಿಷತ್ತಿನ ಮೊದಲೆರಡು ಅಧ್ಯಾಯಗಳು ಅಶ್ವಮೇಧ ಯಜ್ಞದ ವಿಧಿ-ವಿಧಾನನಿರೂಪಣಪರವಾಗಿದ್ದು ಅದನ್ನು ಹಿನ್ನೆಲೆಯಾಗಿಟ್ಟುಕೊಂಡು 'ಅಶ್ವ'ದಲ್ಲಿ ಚಿಂತಿಸಬೇಕಾದ ಭಗವದ್ರೂಪ ಮತ್ತು ಶ್ರೀಹರಿಯ ಅನೇಕ ಬಗೆಯಾದ ಮಹಿಮೆಗಳನ್ನು ತಿಳಿಸಲು ಈ ಉಪನಿಷತ್ತಿನ ಮೂರನೆಯ ಅಧ್ಯಾಯ ಮೈದಳೆದಿದೆ.

ಈ ಉಪನಿಷತ್ತನ್ನು ಸೃಷ್ಟಿಯ ಆದಿಯಲ್ಲಿ ನಾಲ್ಮೊಗನು ಸೂರ್ಯನಿಗೆ ಉಪದೇಶಿಸಿದನು. ಸೂರ್ಯನು ವಾಜಿ(ಕುದುರೆ)ರೂಪದಿಂದ ಯಾಜ್ಞವಲ್ಕ್ಯರಿಗೆ ಉಪದೇಶಿಸಿದನು. ಯಾಜ್ಞವಲ್ಕ್ಯರು ಕಣ್ವರಿಗೆ ಉಪದೇಶಿಸಿದರು. ಆದ್ದರಿಂದ ಈ ಉಪನಿಷತ್ತನ್ನು 'ಕಾಣ್ವ' ಎಂದೂ ಕರೆಯಲಾಗಿದೆ. ಈ ಉಪನಿಷತ್ತಿನಿಂದ ಪ್ರತಿಪಾದ್ಯನಾದವ ಸಿರಿಯರಸ.

# ಉಪನಿಷತ್ತಿನ ಸಾರ

ಅಶ್ವಮೇಧದಲ್ಲಿ ಸಮರ್ಪಿಸಲ್ಪಡುವ ಕುದುರೆಯಲ್ಲಿ ಚಿಂತಿಸಬೇಕಾದ ದೇವತಾ ಸನ್ನಿಧಾನ ಮತ್ತು ಭಗವನ್ಮಹಿಮೆಯ ಬಗ್ಗೆ ಈ ಉಪನಿಷತ್ತು ಬೆಳಕು ನೀಡಿ ವೇದೋಕ್ತ ಕರ್ಮಗಳ ಅನುಷ್ಠಾನವನ್ನು ಒತ್ತಿ ಹೇಳಿದೆ. ಅನಂತರ ಜಲಸೃಷ್ಟಿಯ ವಿವರಣೆ ಮನೋಜ್ಞ ವಾಗಿ ಇಲ್ಲಿ ಮೂಡಿಬಂದಿದೆ. ಶ್ರೀಹರಿಯು ತನ್ನ ಪೂಜೆಯಲ್ಲಿ ತೊಡಗಿ ಪೂಜೋ ಪಯೋಗಿಯಾದ ನೀರನ್ನು ಸೃಷ್ಟಿಸಿದನು. ಭಗವಂತನ ಪೂಜಾಕಾಲದಲ್ಲಿ ಜನ್ಮ ತಳೆದ ಕಾರಣ ನೀರನ್ನು 'ಅರ್ಕ' ಎನ್ನಲಾಗುವುದು. ನೀರು ಶುದ್ಧಿ-ಸುಖಗಳಿಗೆ ಕಾರಣವಾದ ವಸ್ತು. ಶ್ರೀಹರಿಯಿಂದ ಪೂಜೆಗಾಗಿ ನಿರ್ಮಿತಗೊಂಡುದು. ಇದನ್ನು ಶ್ರೀಹರಿಪೂಜೆಗೆ ಬಳಸಿ ಜೀವನಕ್ಕಾಗಿ ಬಳಸಬೇಕೆಂಬ ತಿಳುವಳಿಕೆಯೂ ನಮಗೆ ಪುಣ್ಯ-ಸುಖಗಳಿಗೆ ಕಾರಣವಾಗಬಲ್ಲದು.

ಶ್ರೀಹರಿಯು ಮೊದಲು ಪ್ರಾಣನಿಗೆ ಜನ್ಮ ನೀಡಿದನು ಅವನು ಅಗ್ನಿ-ವಾಯು -ಆದಿತ್ಯ ಎಂಬ ಮೂರು ರೂಪಗಳಿಂದ ಮೈದಳೆದನು. ಸಮಗ್ರ ಬ್ರಹ್ಮಾಂಡವನ್ನು ಹೊತ್ತ ಹಿರಿಮೆ ಕೂರ್ಮರೂಪಿಯಾದ ವಾಯುದೇವನದು. ವಾಯುದೇವರ ಪಾದಾವಲಂಬಿಯಾಗಿ ಆದಿಶೇಷನು ವಿಶ್ವವನ್ನೆಲ್ಲ ಹೊತ್ತು ನಿಂದಿರುವನು. ವಾಯುದೇವನಿಗೆ ಶಕ್ತಿಪ್ರದನಾಗಿ ಶ್ರೀಹರಿ ಕೂರ್ಮರೂಪದಿಂದ ಬ್ರಹ್ಮಾಂಡದ ಒಳಹೊರಗೆ ಆಸರೆಯಾಗಿರುವನು. ನಾಲ್ಮೊಗನ ಮೂಲಕ ಎಲ್ಲವನ್ನು ಸೃಷ್ಟಿಸಿದ ಹರಿ ಪ್ರಲಯಕಾಲದಲ್ಲಿ ಎಲ್ಲವನ್ನೂ ಹೊಟ್ಟೆಯಲ್ಲಿ ಹಾಕಿಕೊಂಡು ಪವಡಿಸಿ 'ಮೃತ್ಯು' ಎನಿಸಿದ.

## ಪ್ರಾಣನಿಗೆ ಅಸುರಾವೇಶವಿಲ್ಲ

ನಾಲ್ಮೊಗನ ಮಕ್ಕಳು ದೇವ-ದಾನವರು. ದಾನವರು ಸಂಖ್ಯಾಬಲ-ವರಬಲ ಎರಡ-ರಿಂದಲೂ ದೇವತೆಗಳೊಡನೆ ಸ್ಪರ್ಧೆಗಿಳಿದವರು. ದೇವತೆಗಳ ಸಂಖ್ಯೆ ಅಲ್ಪವಾದರೂ ಭಕ್ತಿ-ವೈರಾಗ್ಯಗಳೇ ಅವರ ಸಂಪತ್ತು. ದೈತೇಯರ ಆಘಾತದಿಂದ ತಪ್ಪಿಸಿಕೊಳ್ಳಲು ಮತ್ತು ಅಭೀಷ್ಟಸಿದ್ಧಿಗಾಗಿ ಯಜ್ಞದ ಮೂಲಕ ಹರಿಯ ಆರಾಧನೆಯ ದಾರಿ ಹಿಡಿದರು. ಸಾಮಗಾನದ ಮೂಲಕ ಗಾನಲೋಲ ಸಿರಿಯರಸನ ಒಲುಮೆ ಬಯಸಿದರು. ಅದಕ್ಕಾಗಿ ಅಗ್ನಿ-ನಾಸಿಕ್ಯ ವಾಯು-ಸೂರ್ಯ ಮೊದಲಾದ ಇಂದ್ರಿಯಾಭಿಮಾನಿ ದೇವತೆಗಳು ಪ್ರಯತ್ನ ನಡೆಸಿದರು. ಆದರೆ ಇಂದ್ರಿಯ-ಅದರ ಅಭಿಮಾನಿ ದೇವತೆಗಳನ್ನು ದೈತ್ಯರು ತಮ್ಮ ಪ್ರಭಾವದಿಂದ ಮಲಿನಗೊಳಿಸಿದರು. ಆದ್ದರಿಂದಲೇ ಎಲ್ಲ ಇಂದ್ರಿಯಗಳು ಒಳ್ಳೆಯದನ್ನೂ ಕೆಟ್ಟದ್ದನ್ನೂ ಸ್ವೀಕರಿಸುವವು. ವಿಕಾರವನ್ನು ತಡೆಗಟ್ಟುವಲ್ಲಿ ದೇವತೆಗಳು ಅಸಮರ್ಥರಾದರು. ದೇವತೆಗಳೆಲ್ಲ ಮುಖ್ಯಪ್ರಾಣನಿಗೆ ಶರಣಾದರು. ದಾನವರು ಪ್ರಾಣನನ್ನು ಆಕ್ರಮಿಸಲು ಯತ್ನಿಸಿ ಬಂಡೆಗಲ್ಲಿಗೆ

ಅಪ್ಪಳಿಸಿದ ಮಣ್ಣಿನ ಹೆಂಟೆಯಂತೆ ಪುಡಿಪುಡಿಯಾದರು. ಪ್ರಾಣಶಕ್ತಿಯ ಎದುರು ನಿಲ್ಲಲಾಗದೇ ಹೇಳಹೆಸರಿಲ್ಲದೇ ಪಲಾಯನಗೈದರು. ಪ್ರಾಣನ ಕೃಪೆಯಿಂದ ದೇವತೆಗಳು ತ್ರಿಲೋಕಾಧಿ ಪತ್ಯವನ್ನು ಪಡೆದರು. ಪ್ರಾಣದೇವನನ್ನು ಆಶ್ರಯಿಸಿದ ದೇವತೆಗಳು ಎಲ್ಲ ಪ್ರಾಣಿಗಳಲ್ಲಿ ನೆಲೆಪಡೆದು ಮುಖ್ಯಪ್ರಾಣ ನೀಡಿದ ಅನ್ನ-ವಸತಿಗಳನ್ನು ಪಡೆದು ಹರಿಗುರುಕೈಂಕರ್ಯ ನೆರವೇರಿಸಿದರು. ಈ ಪ್ರಜ್ಞಾ- ಜಾಗೃತಿಯೂ ಆಶ್ರಿತರಕ್ಷಣ ಭಾಗ್ಯ ಕರುಣಿಪುದು. ಸುಜನರನು ದುಃಖದಿಂದ ಆನಂದದತ್ತ ಅಜ್ಞಾನದಿಂದ ವಿಜ್ಞಾನದತ್ತ ಮರಣದಿಂದ ಮುಕ್ತಿಯತ್ತ ಕರೆದೊಯ್ಯುವ ಹಿರಿಯ ದೇವತೆ ಮುಖ್ಯಪ್ರಾಣ. ನಿರ್ಭೀತ ನಿರಂಜನನಾದ ಪ್ರಾಣದೇವ ಭಾರತಿಯೊಡನೆ ಬೆರೆತು ಅಸಂಖ್ಯ ಶರೀರಗಳಿಗೆ ಜನ್ಮ ನೀಡಿದನು. ಅನ್ನ-ಭೋಗಗಳನ್ನು ಕರುಣಿಸಿ ಎಲ್ಲರನು ಪೊರೆದನು

## ಅಹಂ ಬ್ರಹ್ಮಾಸ್ಮಿ

ಸೃಷ್ಟಿಯ ಆದಿಯಲಿ ಅಸಹಾಯನಾಗಿದ್ದ ಶ್ರೀಹರಿ ನಾನು ಎಲ್ಲರಿಂದ ಅತ್ಯಾಜ್ಯ ನಾದುದರಿಂದ 'ಅಹಮ್', ಗುಣಪೂರ್ಣನಾದುದರಿಂದ 'ಬ್ರಹ್ಮ', ನಿತ್ಯ ನಿರಂತರ ಅವಿಕಾರಿ-ಯಾಗಿ ಇರುವುದರಿಂದ 'ಅಸ್ಮಿ' ಎಂದು ತನ್ನ ಮಹಿಮೆಯನ್ನು ಮೆಲುಕು ಹಾಕಿದನು. ಇದನರಿತು ಉಪಾಸಗೈದ ದೇವತೆಗಳು ಸ್ವಯೋಗ್ಯಪೂರ್ಣತೆ ಪಡೆದರು. ''ಜೀವ-ಜಡಾತ್ಮಕ ವಿಶ್ವದಿಂದ ಎಂದೆಂದೂ ಭಿನ್ನನಾದ ಶ್ರೀಹರಿಯನ್ನು ತ್ಯಾಜ್ಯನೆಂದೂ ಬ್ರಹ್ಮರುದ್ರಾದಿಗಳು ಅತ್ಯಾಜ್ಯರೆಂದೂ'' ಚಿಂತಿಸುವ ಅನ್ಯಥೋಪಾಸಕರು ತಮಸ್ಸಿಗೆ ತೆರಳುವರು.

## ಎಲ್ಲೆಲ್ಲಿಯೂ ಚಾತುರ್ವರ್ಣ್ಯ

ಗುಣ-ಕರ್ಮಗಳಿಗೆ ಅನುಗುಣವಾಗಿ ದೇವತೆಗಳಲ್ಲಿ ಬ್ರಾಹ್ಮಣ- ಕ್ಷತ್ರಿಯ-ವೈಶ್ಯ-ಶೂದ್ರರೆಂಬ ನಾಲ್ಕು ವರ್ಗ ಇದೆ. ನಾಲ್ಮೊಗ ಬ್ರಾಹ್ಮಣ. ವಾಯು-ಶಂಕರ-ಶೇಷ-ಗರುಡ-ಇಂದ್ರ-ಕಾಮ ಮೊದಲಾದವರು ಕ್ಷತ್ರಿಯರು. ಕೆಲವು ಆದಿತ್ಯರು, ಉಮೇಶನನ್ನು ಹೊರತುಪಡಿಸಿ ಹತ್ತು ಮಂದಿ ರುದ್ರರು, ಮುಖ್ಯಪ್ರಾಣನನ್ನು ಹೊರತುಪಡಿಸಿ ಉಳಿದ ಮರುತ್ತುಗಳು, ಅಗ್ನಿಯನ್ನು ಹೊರತುಪಡಿಸಿ ಇತರ ವಸುಗಳು ವೈಶ್ಯರೆನಿಸುವರು. ಪೃಥಿವೀ-ಕಾಲ-ಮೃತ್ಯು-ನಿರ್ಋತಿಗಳು ಶೂದ್ರರು.

ವರ್ಣವ್ಯವಸ್ಥೆ ಶ್ರೀಹರಿಸೇವೆಗೆ ಪೂರಕ. ಸುವೆಲ್ಲಿರುವೆವು ಎಂಬುದು ಮುಖ್ಯವಲ್ಲ. ಇರುವಲ್ಲಿ ಏನು ಕೊಡುಗೆ ನೀಡಬಲ್ಲವೆಂಬುದು ಮುಖ್ಯ. ದೇವತೆಗಳು ತಾವಿರುವ ನೆಲೆಯಲ್ಲಿ ನಡೆಸಿದ ಅನನ್ಯ ಹರಿಸೇವೆ ಮಾನವ ಸಮುದಾಯಕ್ಕೆ ಹಿರಿದಾದ ಆದರ್ಶ. ಶ್ರೀಹರಿ ಕೊಟ್ಟದ್ದನ್ನು ಸಾರ್ಥಕಪಡಿಸಿಕೊಳ್ಳದೆಯೂ ಕೊಡದ ಭಾಗ್ಯವನ್ನು ಶ್ರಮವಿಲ್ಲದೇ ಬಯಸಿ ಕೊರಗುವವರಿಗೆ ದುಃಖ-ಅಪಾಯಗಳು ಅಪರಿಹಾರ್ಯ.

## ಸಪ್ತಾನ್ನ ವಿದ್ಯೆ

ಶ್ರೀಹರಿಯ ಸೃಷ್ಟಿಯ ಹರವು ಕಲ್ಪನಾತೀತ. ಅವನು ಸಮಗ್ರ ವಿಶ್ವದ ತಂದೆ. ಅನ್ನದ ಕೂಡ. ಅವನು ಸೃಷ್ಟಿಸಿದ ಏಳು ಬಗೆಯ ಅನ್ನದ ಪರಿಕಲ್ಪನೆ ಸಂತಸದಾಯಕ. ನಿತ್ಯ ಮಾನವರು ತಿನ್ನುವ ಅನ್ನವು ಸರ್ವಸಾಧಾರಣ. ಅಂದರೆ ಇದನ್ನು ಶ್ರೀಹರಿಗೆ, ದೇವತೆಗಳಿಗೆ, ಬ್ರಾಹ್ಮಣರಿಗೆ(ಬ್ರಹ್ಮಜ್ಞಾನಿಗೆ) ನೀಡಿ ಯಜಮಾನನು ಸ್ವೀಕರಿಸಬೇಕು. ಅನ್ನ, ತನ್ನದೇ ಸಂಪತ್ತು ಎಂಬ ಭ್ರಮೆ ಸಲ್ಲದು. ಇತರರಿಗೆ ವಿತರಿಸಿದಾಗ ನಾವು ತಿನ್ನುವ ಅಧಿಕಾರ ಪಡೆಯುತ್ತೇವೆ. ವೈಶ್ವದೇವ- ಬಲಿಹರಣಗಳು ದೇವತೆಗಳ ಅನ್ನ. ಅಧಿಕಾರಿಗಳು ಮಾಡುವ ಈ ಕರ್ಮಗಳಿಂದ ಸಂತುಷ್ಟರಾದ ದೇವತೆಗಳು ಸಮಸ್ತ ಜೀವಿಗಳಿಗೆ ಸುಖ-ಸಮೃದ್ಧಿ ಕರುಣಿಸುವರು. ಮನಸ್ಸು-ವಾಕ್-ಪ್ರಾಣ ಈ ಮೂರು ಶ್ರೀಹರಿಗೆ ಅರ್ಪಿಸಬೇಕಾದ ಅನ್ನ. ಇವು ಬಹಿರ್ಮುಖವಾಗದಂತೆ ಮತ್ತು ಶ್ರೀಹರಿಗೆ ಅಭಿಮುಖವಾಗುವಂತೆ ಬದುಕುವುದೇ 'ಸಮರ್ಪಣೆ'-'ಸಂತರ್ಪಣೆ'.

ಏಳನೆಯ ಅನ್ನ, ಶೈಶವದಲ್ಲಿ ಎಲ್ಲ ಪ್ರಾಣಿಗಳಿಗೆ ಸಮಾನವಾದುದು–ಹಾಲು. 'ಕೊಟ್ಟು ಉಣಲೋಸುಗ ಅನ್ನಸೃಷ್ಟಿ' ಎಂಬ ಉಪನಿಷತ್ತಿನ ಸಂದೇಶ ಸದಾ ಮನನೀಯವಾದುದು.

## ಉಪದೇಶ, ಬಯಸಿ ಬಂದವರಿಗೆ ಮಾತ್ರ

ಗರ್ಗಗೋತ್ರದಲ್ಲಿ ಜನಿಸಿದ ಬಾಲಾಕಿ ಎಂಬ ಬ್ರಾಹ್ಮಣನು ವೇದಾಧ್ಯಯನ ಸಂಪನ್ನನಾಗಿ ಅಹಂಕಾರಿಯಾಗಿದ್ದನು. ಅವನು ಕಾಶಿಯ ರಾಜನಾದ ಅಜಾತಶತ್ರುವಿನ ಬಳಿ ತೆರಳಿ 'ನಿನಗೆ ನಾನು ಬ್ರಹ್ಮೋಪದೇಶ' ನೀಡುವೆನೆಂದನು. ಅಜಾತಶತ್ರುವು, ತತ್ತ್ವೋಪದೇಶವು ಕೇವಲ ಕೇಳಬಯಸಿದ ಸಾಧಕನಿಗೆ ಮಾತ್ರ ಸಂಬಂಧಿಸಿದೆಯಲ್ಲದೇ ಪ್ರದರ್ಶನ ಅಥವಾ ಲೌಕಿಕಲಾಭಕ್ಕಾಗಿ ಅಲ್ಲ ಎಂಬ ಸತ್ಯವರಿತವನು. ಬಾಲಾಕಿಯನ್ನು ಅಜಾತಶತ್ರುವು ಲಘುವಾಗಿ ಮಾತನಾಡಿಸಿದನು–'ನೀನು ಉಪದೇಶಿಸುವಿಯಾ? ನಿನಗೆ ಬ್ರಹ್ಮಜ್ಞಾನವಿರುವುದಾದರೆ, ಬ್ರಾಹ್ಮಣನಾದ ನಿನ್ನನ್ನು ತೊರೆದು ಸಾಧಕರೆಲ್ಲ ಜನಕನ ಬಳಿ ಧಾವಿಸುವುದೇಕೆ? ನೀನು ನಿಜವಾಗಿ ಬ್ರಹ್ಮೋಪದೇಶ ನೀಡಲು ಸಮರ್ಥನಾಗಿರುವಲ್ಲಿ ಸಾವಿರ ಹಸುಗಳನ್ನು ದಾನ ನೀಡುವೆ. ಆದರೆ ನೀನು ಬ್ರಹ್ಮಜ್ಞಾನಿ ಅಲ್ಲ' ಎಂದನು.

ಆಗ ಬಾಲಾಕಿಯು ಸೂರ್ಯ-ಚಂದ್ರ-ಮಿಂಚು ಮೊದಲಾದ ಕಡೆ ಇರುವ ಭಗವಂತನ ಉಪಾಸನಾಕ್ರಮ-ಫಲಗಳ ಬಗ್ಗೆ ಉಪದೇಶಿಸಿದನು. ಆಗ ಅಜಾತಶತ್ರುವು ತಿಳಿಸಿದನು–'ಕೇವಲ ಈ ಪ್ರತೀಕಗಳಲ್ಲಿರುವ ಬ್ರಹ್ಮೋಪಾಸನೆ, ಸಾಕ್ಷಾತ್ಕಾರ ಹಾಗೂ ಮುಕ್ತಿಗೆ ಕಾರಣವಾಗಲಾರದು. ಹೃದಯದಲ್ಲಿರುವ ಭಗವಂತನ ಉಪಾಸನೆಯೇ ಮುಕ್ತಿಸಾಧನ. ಸಾಧಕರು ಆಯಾ ದೇವತೆಯ ಹೃದಯದಲ್ಲಿರುವ ಭಗವಂತನ ಉಪಾಸನೆಯಿಂದ ಆಯಾ ದೇವತೆಯ ಸಾಮೀಪ್ಯ ಮಾತ್ರ

ಹೊಂದಬಲ್ಲರು. ಮುಕ್ತಿಗಾಗಿ ಹೃದಯದಲ್ಲಿರುವ ಭಗವಂತನ ಉಪಾಸನೆ ಅತಿ ಕಡ್ಡಾಯ. ಪ್ರತಿಮೋಪಾಸಕರು ಮತ್ತು ವ್ಯಾಪ್ತ್ಯೋಪಾಸಕರು ಹೃದಯಗತ ಭಗವಂತನ ಉಪಾಸನೆ ಮಾಡಲೇಬೇಕು. ಅವನೇ ಎಲ್ಲರ ಜನಕ, ಎಲ್ಲ ಅವಸ್ಥೆಗಳ ಪ್ರೇರಕ. 'ಸತ್ಯಸ್ಯ ಸತ್ಯಮ್' ಎಂಬುದು ಅವನ ರಹಸ್ಯ ನಾಮ. ಇಂದ್ರಿಯ-ಲೋಕ-ದೇವಗಣ-ಪ್ರಾಣಿಗಳೆಲ್ಲ 'ಸತ್ಯ' ಎನಿಸಿರುವವು. ಅವರಿಗೆ ಹುಟ್ಟು-ರಕ್ಷಣೆ-ಸಂಹಾರ-ನಿಯಮನಾದಿಗಳನ್ನು ಮಾಡುವ ಕಾರಣ ಶ್ರೀಹರಿಯು 'ಸತ್ಯಸ್ಯ ಸತ್ಯ' ಎನಿಸಿದ್ದಾನೆ.

## ಭೌತಿಕ ಸಂಪತ್ತು ಮುಕ್ತಿ ನೀಡದು

ಸನ್ಯಾಸಕ್ಕೆ ತೆರಳಬಯಸಿದ ಯಾಜ್ಞವಲ್ಕ್ಯರು ತಮ್ಮ ಇಬ್ಬರು ಮಡದಿಯರಿಗೆ ತಮ್ಮ ಭೌತಿಕ ಸಂಪತ್ತನ್ನು ಹಂಚಿ ತೆರಳಬಯಸಿದರು. ಸಾಮಾನ್ಯ ಸ್ತ್ರೀಯರಂತಿರುವ ಕಾತ್ಯಾಯನಿ ಸಂಪತ್ತನ್ನು ಅಂಗೀಕರಿಸಿದರೂ ಅಧ್ಯಾತ್ಮ ಪ್ರಜ್ಞೆಯ ಮೈತ್ರೇಯಿ ಯಾಜ್ಞವಲ್ಕ್ಯರಿಗೆ ಪ್ರಶ್ನಿಸಿದಳು. ಸಂಪತ್ತಿನಿಂದ ತುಂಬಿ ಭೂಮಂಡಲವನ್ನು ತಾವು ನೀಡಿದರೂ ಮುಕ್ತಿ ದೊರಕಬಲ್ಲದೆ? 'ಖಂಡಿತ ಸಾಧ್ಯವಿಲ್ಲ. ಮುಕ್ತಿ ತ್ಯಾಗ ಮತ್ತು ತತ್ತ್ವಜ್ಞಾನದಿಂದ ದೊರಕಬಹುದಲ್ಲದೇ ಸಂಪತ್ತಿನಿಂದ ದೊರಕದು. ಆಗ ಮೈತ್ರೇಯಿ ಯಾವ ತತ್ತ್ವಜ್ಞಾನವು ಮುಕ್ತಿಗೆ ಕಾರಣವಾಗಬಲ್ಲದೋ ಅಂತಹ ಬ್ರಹ್ಮಸ್ವರೂಪವನ್ನು ಉಪದೇಶಿಸಿರೆಂದು ಪ್ರಾರ್ಥಿಸಿದಳು.

## ಶ್ರೀಹರಿಯ ಇಚ್ಛೆಯೇ ಪ್ರಿಯಾಪ್ರಿಯಗಳ ನಿರ್ಣಾಯಕ

ಅಧ್ಯಾತ್ಮದಲ್ಲಿ ನಿರಂತರ ನೆನೆಯಬೇಕಾದ ಸಂಗತಿಯೊಂದನ್ನೂ ಯಾಜ್ಞವಲ್ಕ್ಯರು ಉಪದೇಶಿಸಿದರು. ಮಾನವನು ತನಗೆ ಹೆಂಡತಿ, ಮಕ್ಕಳು, ಹಣ ಇತ್ಯಾದಿ ಭೋಗ ವಸ್ತುಗಳು ಸಂತಸ ಸಮಾಧಾನ ತರುವವೆಂದು ಬಯಸುತ್ತಾನೆ. ಅದರಿಂದ ತನಗೆ ಸದಾ ಹಿತವಾಗುವುದೆಂದು ನಂಬುತ್ತಾನೆ. ಆದರೆ ಎಲ್ಲರ ಪಾಲಿಗೂ ಈ ಭೋಗವಸ್ತುಗಳು ಸುಖ ಸಂತಸ ತಂದಿಲ್ಲ. ಹೆಂಡತಿ- ಮಕ್ಕಳು-ಹಣ ಕೆಲವರಿಗೆ ಸುಖ ನೀಡಿದರೂ ಎಲ್ಲ ಕಾಲಕ್ಕಲ್ಲ. ಕೆಲವೊಮ್ಮೆ ಇವುಗಳ ಸಂಪರ್ಕವೇ ತೀವ್ರ ದುಃಖಕ್ಕೆ ಕಾರಣವಾಗುವುದಿದೆ. ಹಾಗಿದ್ದರೆ ನಾವು ಯಾವುದನ್ನು ಪ್ರೀತಿಸಿದೆವೋ ಅದು ದುಃಖಕಾರಣವಾದುದು ಹೇಗೆ? ಎಂಬ ಸಂದೇಹ ಸಹಜ. ಇಲ್ಲಿ ಗಮನಿಸಬೇಕಾದ ಸತ್ಯವೊಂದಿದೆ. ಭೋಗವಸ್ತುಗಳು ಸುಖ ನೀಡಬಲ್ಲವೆಂಬುದು ಆಂಶಿಕ ಸತ್ಯ. ಇದಕ್ಕಿಂತ ಮಿಗಿಲಾಗಿ ಇವುಗಳಿಂದ ಈ ವ್ಯಕ್ತಿಗೆ ಸುಖ ದೊರಕಲಿ ಎಂಬ ಭಗವಂತನ ಇಚ್ಛೆಯೇ ಈ ವಸ್ತುವಿನ ಮೂಲಕ ನಮಗೆ ಸುಖ ದೊರೆಯಲು ಕಾರಣವಾಗಿದೆ. ನಮಗೆ ಸುಖದಾಯಕ ವಸ್ತುವೂ ಶ್ರೀಹರಿಯ ಇಚ್ಛೆಯಂತೆ ದುಃಖಸಂತಾಪಗಳನ್ನು ನೀಡಬಹುದು. ಸುಖ ದುಃಖ ನೀಡುವುದು ಆಯಾ ವಸ್ತುಗಳ ಮೂಲ ಸ್ವಭಾವವಲ್ಲ. ಅಲ್ಲಿರುವ ಸುಖ ನೀಡಬೇಕೆಂಬ ಹರಿಯ ಇಚ್ಛೆಯಿಂದ

ಅವುಗಳ ಮೂಲಕ ನಮಗೆ ಸುಖ ದೊರಕುವುದು. ಅವನ ಕೃಪೆ ಇಲ್ಲದಲ್ಲಿ ಹಗ್ಗ ಹಾವಾಗಬಲ್ಲದು; ಅಮೃತವೂ ವಿಷವಾಗಬಹುದು. ಈ ನಿಟ್ಟಿನಲ್ಲಿ ಎಲ್ಲದಕ್ಕೂ ಕಾರಣನಾದ ಅವನ ಅರಿವಿನ ಸಂಪಾದನೆಗಾಗಿ ನಮ್ಮ ಬದುಕಿನ ಹೆಚ್ಚಿನ ಅಮೂಲ್ಯ ಸಮಯವನ್ನು ವ್ಯಯಗೊಳಿಸಬೇಕು. ಶ್ರವಣ-ಮನನ-ಧ್ಯಾನಗಳಿಂದ ಅವನ ಸಾಕ್ಷಾತ್ಕಾರ ಪಡೆಯಬೇಕು.

ನಗಾರಿಯ ಶಬ್ದದ ಸ್ವರೂಪವನ್ನು ತಿಳಿದವನು ನಗಾರಿಯ ಬಡಿತದಿಂದ ಜನ್ಯವಾದ ಶಬ್ದವನ್ನು ನಗಾರಿಯ ಅಧೀನವೆಂದು, ಇನ್ನೊಂದು ವಾದ್ಯದಿಂದ ಈ ಶಬ್ದ ಜನಿಸಲಾರದೆಂದೂ ತಿಳಿಯುವಂತೆ ಶ್ರೀಹರಿಯ ಇಚ್ಛಾಶಕ್ತಿಯನ್ನು ಅರಿತವನು ಈ ವಿಶ್ವವು ಚತುರಾನನ ಮೊದಲಾದವರ ಸೃಷ್ಟಿಯಲ್ಲವೆಂದು ಅವರ ಅಧೀನವಲ್ಲವೆಂದೂ ಕೇವಲ ಶ್ರೀಹರಿಯ ಅಧೀನವೆಂದೂ ಸರಳವಾಗಿ ಗುರುತಿಸುವನು. ಇಂತಹ ಶ್ರೀಹರಿ ಇಲ್ಲಿಯೂ ಮುಕ್ತಿಯಲ್ಲೂ ಜೀವಾಧಾರನಾಗಿದ್ದಾನೆ.

## ಮುಕ್ತಿಯಲ್ಲಿ ಏನಿಲ್ಲ?

ಯಾಜ್ಞವಲ್ಕ್ಯರ 'ನ ಪ್ರೇತ್ಯ ಸಂಜ್ಞಾಽಸ್ತಿ' ಎಂಬ ಉಪದೇಶವನ್ನು ಕೆಲವರು ತಪ್ಪಾಗಿ ವ್ಯಾಖ್ಯಾನಿಸಿದ್ದಾರೆ. ಮುಕ್ತಿಯಲ್ಲಿ ನಿರ್ಗುಣ-ನಿರಾಕಾರ ಚೈತನ್ಯವೊಂದೇ ಇರುವುದು. ಈಗ ಕಾಣುವುದೆಲ್ಲ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ. ಜ್ಞಾತೃ-ಜ್ಞೇಯಗಳಿಲ್ಲದ ಜ್ಞಾನರೂಪನಾದ ಆತ್ಮನೊಬ್ಬನೇ ಉಳಿಯುವುದಾದರೆ ಆ ಮುಕ್ತಿ ಪುರುಷಾರ್ಥ ವಾಗುವುದು ಹೇಗೆ? ಚೈತನ್ಯಕ್ಕಿಂತ ಭಿನ್ನ ವಸ್ತು ಇಲ್ಲದಲ್ಲಿ, ಅದರ ಜ್ಞಾನವು ಆತ್ಮನಿಗೆ ಬಾರದಿರುವಲ್ಲಿ, ಅವನು ಜ್ಞಾನರೂಪ- ನಾಗಿರುವನೆಂಬ ಮಾತಿಗೆ ಔಚಿತ್ಯವೇನಿದೆ? ಜ್ಞಾನನಾಶವಾಗುವ ಜಡತುಲ್ಯ ಸ್ಥಿತಿಗಿಂತ ಸಂಸಾರವೇ ಉತ್ತಮವಾಗಲಾರದೆ? ಆದ್ದರಿಂದ ಮುಕ್ತಿಯಲ್ಲಿ ಅನೇಕ ಜೀವರ ಅಸ್ತಿತ್ವ, ಭೋಗಸಾಧನಗಳ ಅಸ್ತಿತ್ವವನ್ನು ಒಪ್ಪುವುದು ಅನಿವಾರ್ಯ.

## ಜನಕರಾಜನ ಸಭೆ-ಯಾಜ್ಞವಲ್ಕ್ಯರ ಉಪದೇಶ

ಜನಕರಾಜನ ವಿದ್ಯಾಭಿವರ್ಧಕ ತತ್ತ್ವನಿರ್ಣಾಯಕ ಸಭೆಗೆ ಜ್ಞಾನಿಗಳಾದ ಅನೇಕ ಋಷಿಮುನಿಗಳು ಆಗಮಿಸಿದರು. ಯಾಜ್ಞವಲ್ಕ್ಯರೂ ಆಗಮಿಸಿದರು. ರಾಜನು ಜ್ಞಾನಿಶ್ರೇಷ್ಠರನ್ನು ಗುರುತಿಸಲು, ಗೌರವಿಸಲು ಚಿನ್ನದ ಹೊದಿಕೆಯಿಂದ ಅಲಂಕೃತವಾದ ಕೊಂಬುಳ್ಳ ಒಂದು ಸಾವಿರ ಹಸುಗಳನ್ನು ಸಿದ್ಧಪಡಿಸಿದನು. ತಮ್ಮಲ್ಲಿ ಶ್ರೇಷ್ಠ ಜ್ಞಾನಿಗಳು ಇವುಗಳನ್ನು ಸ್ವೀಕರಿಸಬೇಕೆಂದು ಜನಕರಾಜನು ಬಿನ್ನವಿಸಿದನು. ಯಾಜ್ಞವಲ್ಕ್ಯರು ಆ ಹಸುಗಳನ್ನು ತಮ್ಮ ಗೋಶಾಲೆಗೆ ತೆಗೆದುಕೊಂಡು ಹೋಗಲು(ಸಾಮಶ್ರವನೆಂಬ ತಮ್ಮ ಶಿಷ್ಯನಿಗೆ) ಆದೇಶಿಸಿದರು. ಆಗ ವಿದ್ವಾಂಸರೆಲ್ಲ ಯಾಜ್ಞವಲ್ಕ್ಯರನ್ನು ನೀವೇ ಶ್ರೇಷ್ಠ ಜ್ಞಾನಿಯೊ? ಎಂದು ಆಕ್ಷೇಪಿಸಿದರು. ವಾಸ್ತವವಾಗಿ ನೆರೆದ ಜ್ಞಾನಿಗಳಲ್ಲಿ ಯಾಜ್ಞ ವಲ್ಕ್ಯರು ಶ್ರೇಷ್ಠರಾಗಿದ್ದರೂ ನಮ್ರತೆ-ಸೌಜನ್ಯಗಳಿಂದ

ಮಾರ್ನುಡಿದರು–'ಉತ್ತಮ ಬ್ರಹ್ಮಜ್ಞಾನಿಗೆ ನಮ್ಮ ನಮಸ್ಕಾರಗಳು. ನಮಗೆ ಹಸುಗಳ ಅಗತ್ಯವಿರುವುದರಿಂದ ತೆಗೆದುಕೊಂಡಿದ್ದೇವೆ'.

ಆಗ ಜನಕನ ಋತ್ವಿಜನಾದ ಆಶ್ವಲನು ಯಾಜ್ಞವಲ್ಕ್ಯರನ್ನು ಪರೀಕ್ಷಿಸಲು ಪ್ರಶ್ನಿಸಿದನು– ಎಲ್ಲರನ್ನೂ ಕಬಳಿಸುವ ಮೃತ್ಯುವಿನಿಂದ ಬಿಡುಗಡೆ ಹೇಗೆ? ಯಾಜ್ಞವಲ್ಕ್ಯರು ಉತ್ತರಿಸಿದರು– ಹೋತೃ–ಅಗ್ನಿ–ವಾಕ್ ಇವರಲ್ಲಿದ್ದು ಇವರಿಂದ ಆಯಾ ಕರ್ಮಗಳನ್ನು ಮಾಡಿಸುವ ತ್ತತನ್ನಾಮಧಾರಿಯಾದ ವಾಸುದೇವನ ಜ್ಞಾನವೇ ಮೃತ್ಯುವನ್ನು ಗೆಲ್ಲುವ ಉಪಾಯ.

## ಸಾಮಗಾನ ಅಭೀಷ್ಟಪ್ರದ

ಉದ್ಗಾತೃವು ಎಷ್ಟು ಋಕ್ಕುಗಳಿಂದ ಸಾಮವನ್ನು ಹಾಡುತ್ತಾನೆ? ಆಶ್ವಲರು ಪ್ರಶ್ನಿಸಿದರು. ಯಾಜ್ಞವಲ್ಕ್ಯರು ಉತ್ತರಿಸಿದರು. 'ಮೊದಲನೆಯದು ಪುರೋನುವಾಕ್ಯಾ, ಎರಡು ಮೂರನೆ-ಯದು 'ಯಾಜ್ಯಾ', 'ಶಸ್ಯಾ' ಎನಿಸಿವೆ. ಸ್ಥೂಲದೇಹದಲ್ಲಿ ಈ ಮೂರು ಋಕ್ಕುಗಳ ಅಭಿಮಾನಿ ದೇವತೆಗಳು ಪ್ರಾಣ–ಅಪಾನ–ವ್ಯಾನ ಎಂಬ ಪ್ರಾಣನ ರೂಪಗಳು. ಇವುಗಳಲ್ಲಿರುವ ಅನಿರುದ್ಧನ ಉಪಾಸನಯಿಂದ ಕ್ರಮವಾಗಿ ಪೃಥಿವೀ ಲೋಕ–ಅಂತರಿಕ್ಷ ಲೋಕ–ಸ್ವರ್ಗ ಲೋಕಗಳನ್ನು ಪಡೆಯುತ್ತಾನೆ. ಈ ಹಿನ್ನೆಲೆಯಲ್ಲಿ ಸಾಮಗರಿಗೆ ಅನುಸಂಧಾನ ಮುಖ್ಯವಾಗಿದೆ.

## ಜೀವ ಏಕಾಕಿ ಪಯಣಿಗನಲ್ಲ

ದೇಹವನ್ನು ಜೀವನು ತೊರೆದು ಬೇರೆ ಲೋಕಗಳಿಗೆ ಪಯಣಿಸುವಾಗ ಅವನು ಏಕಾಕಿ ಪಯಣಿಗನಲ್ಲ. ಅವನೊಡನೆ ಇಂದ್ರಿಯಾಭಿಮಾನಿ ದೇವತೆಗಳು ಒಂದು ರೂಪದಿಂದ ಇರುತ್ತಿದ್ದು ಮತ್ತೊಂದು ರೂಪದಿಂದ ಮೂಲರೂಪವನ್ನು ಸೇರುತ್ತಾರೆ. ಮೃತ ಜೀವನು ಅವನ ಪುಣ್ಯ ಪಾಪಕ್ಕನುಗುಣವಾಗಿ ಉತ್ತಮಾಧಮ ಲೋಕಗಳನ್ನು ತಲುಪುತ್ತಾನೆ. ಮುಕ್ತಿ ಪಡೆಯುವಾಗ ಜೀವನ ಪ್ರಾಕೃತದೇಹವು ನಾಶವಾದರೂ ಸ್ವರೂಪಶರೀರದೊಂದಿಗೆ ಅವನು ಮುಕ್ತಿಯಲ್ಲಿರುವನು. ಉತ್ತಮ ಜೀವರ ಯೋಗ್ಯತಾದ್ಯೋತಕವಾದ ನಾಮವು ವ್ಯತ್ಯಾಸಗೊಳ್ಳದಂತೆ ಮುಕ್ತಿಯಲ್ಲೂ ಇರುವುದು. ದೇವತೆಗಳೇ ಅಮೃತರೆನಿಸಿದಾಗ ಅವರ ನಾಮವು ಅಮೃತವಾಗಲಾರದೆ? ಎಂದರು ಯಾಜ್ಞವಲ್ಕ್ಯರು. ಇದು ಆರ್ತಭಾಗ ಯಾಜ್ಞವಲ್ಕ್ಯರ ಪ್ರಶ್ನೋತ್ತರಸಂಗ್ರಹ.

## ಮುಕ್ತರಲ್ಲಿ ತಾರತಮ್ಯವಿದೆ

ಜೀವರ ಸಹಜವಾದ ಯೋಗ್ಯತೆಯು ಭಿನ್ನಭಿನ್ನವಾಗಿದೆ. ಯೋಗ್ಯತೆಯೆನ್ನುವುದು ಪ್ರಯತ್ನದಿಂದ ವ್ಯಕ್ತಗೊಳ್ಳುವ, ವಸ್ತುವಿನಿಂದ ಅವಿಭಾಜ್ಯವಾದ ಒಂದು ಅಂಶ. ಗಾರ್ಗಿಯ ಪ್ರಶ್ನೆಗೆ ಯಾಜ್ಞವಲ್ಕ್ಯರು ಉತ್ತರಿಸುತ್ತ ವಿವರಿಸಿದರು–ಮನುಷ್ಯೋತ್ತಮ ಜೀವರು ಚಕ್ರವರ್ತಿ ಜೀವರನ್ನು ಆಶ್ರಯಿಸಿದ್ದಾರೆ. ಆಶ್ರಿತ ಜೀವವರ್ಗಕ್ಕಿಂತ ಆಶ್ರಯ ನೀಡುವ ಜೀವವರ್ಗ

ಉತ್ಕೃಷ್ಟವೆನಿಸಿ ಮುಕ್ತಿಯಲ್ಲಿ ಹೆಚ್ಚಿನ ಆನಂದಕ್ಕೆ ಪಾತ್ರವಾಗಿರುವುದು. ಮುಕ್ತ ಚಕ್ರವರ್ತಿಗಳು ಮುಖ್ಯ ವಾಯುವಿನ ಮಗನಾದ ಚಕ್ರನಾಮಕ ವಾಯುವನ್ನು ಆಶ್ರಯಿಸಿದ್ದಾರೆ. ಮುಕ್ತ ಚಕ್ರನು ಗಂಧರ್ವನಾಮಕ ಮುಕ್ತ ವಾಯುಪುತ್ರನ ಅಧೀನನಾಗಿದ್ದಾನೆ. ಮುಕ್ತ ಗಂಧರ್ವನ ಸ್ವರೂಪವು ಅಂತರಿಕ್ಷನಾಮಕ ವಾಯುಸುತನ ಅಧೀನವಾಗಿದೆ. ಮುಕ್ತ ಅಂತರಿಕ್ಷನು ಮುಕ್ತ ಸೂರ್ಯನನ್ನು ಆಶ್ರಯಿಸಿರುವನು. ಮುಕ್ತ ಸೂರ್ಯನು ಮುಕ್ತ ಅನಿರುದ್ಧನಲ್ಲಿ ಆಶ್ರಯ ಪಡೆದವನು. ಮುಕ್ತ ಅನಿರುದ್ಧನು ಮುಕ್ತ ಇಂದ್ರನಲ್ಲಿ ಆಶ್ರಿತ. ಮುಕ್ತ ಇಂದ್ರನು ಶೇಷನಲ್ಲಿ, ಶೇಷನು ಮುಕ್ತ ಸರಸ್ವತಿಯಲ್ಲಿ, ಮುಕ್ತ ಸರಸ್ವತಿಯು ಚತುರ್ಮುಖನಲ್ಲಿ, ಚತುರ್ಮುಖನು ಶ್ರೀಹರಿಯನ್ನು ಆಶ್ರಯಿಸಿರುವನು. ಶ್ರೀಹರಿಯು ಯಾರ ಆಶ್ರಯದ ಅಗತ್ಯವಿಲ್ಲದ ಸ್ವತಂತ್ರ ಹಾಗೂ ಪರಿಪೂರ್ಣನಾಗಿರುವನು. ತೈತ್ತಿರೀಯ ಬ್ರಹ್ಮವಲ್ಲಿಯಲ್ಲಿ ಬಂದಂತೆ ಈ ಉಪನಿಷತ್ತಿನಲ್ಲಿ ಮುಂದೆಯೂ ಮುಕ್ತರ ತಾರತಮ್ಯದ ವರ್ಣನೆ ಇದೆ.

ಕೆಳಸ್ತರದ ಜೀವರ ಆನಂದವು ಉತ್ತಮ ಜೀವರ ಆನಂದವನ್ನು ಆಶ್ರಯಿಸಿದೆ ಎಂಬುದು ಪ್ರಕೃತ ಪ್ರಕರಣದ ಸಾರ. ಮುಕ್ತಿಯಲ್ಲೂ ಕೆಳಗಿನ ದೇವತೆಗಳು ಉತ್ತಮ ದೇವತೆಗಳ ನಿಯಂತ್ರಣಕ್ಕೆ ಒಳಪಟ್ಟಿದ್ದಾರೆ. ಉತ್ತಮರ ಅಧೀನರಾಗಿದ್ದಾರೆ. ಅವರವರ ಯೋಗ್ಯತಾ ನುಗುಣವಾದ ಜ್ಞಾನಾನಂದಾದಿ ಗುಣಗಳ ಅಭಿವ್ಯಕ್ತಿಯಲ್ಲಿ ಶ್ರೀಹರಿಯ ಇಚ್ಛಾಶಕ್ತಿಯಂತೆ ಉತ್ತಮರ ಸ್ವಾಮ್ಯವೂ ಇದೆ. ಇದು ಎಂದೆಂದಿಗೂ ಬದಲಾಗುವ ವ್ಯವಸ್ಥೆಯಾಗಿರುವುದಿಲ್ಲ. ಹೀಗೆ ಉಪನಿಷತ್ತು ಮುಕ್ತರಲ್ಲಿ ತಾರತಮ್ಯವನ್ನು ಸ್ಫುಟಪಡಿಸುತ್ತಿದೆ.

### ಮುಖ್ಯಪ್ರಾಣ ಸೂತ್ರ–ವಿಷ್ಣು ಅಂತರ್ಯಾಮಿ

ಒಂದು ದಾರದಲ್ಲಿ ನಾವು ಮಣಿಗಳನ್ನಾಗಲೀ ಹೂವುಗಳನ್ನಾಗಲೀ ಪೋಣಿಸುವಾಗ ಅವುಗಳೆಲ್ಲ ದಾರವನ್ನು ಆಶ್ರಯಿಸಿರುವಂತೆ ಸಮಸ್ತ ದೇವತಾಗಣವು ಪ್ರಾಣಾಧೀನವಾಗಿದೆ. ಈ ಹಿನ್ನೆಲೆಯಲ್ಲಿ ಮುಖ್ಯಪ್ರಾಣನು 'ಸೂತ್ರ' ಎನಿಸಿದ್ದಾನೆ. ಶ್ರೀಹರಿಯು ಪ್ರಾಣ ಹಾಗೂ ಎಲ್ಲ ದೇವತೆಗಳ ಒಳಹೊರಗಿದ್ದು ನಿಯಾಮಕನಾಗಿರುವನು.

ಅವನು ಪೃಥಿವೀನಾಮಕ ಗರುಡ-ಸೌಪರ್ಣಿಗಿಂತ ಭಿನ್ನನಾಗಿದ್ದು ಅವರಲ್ಲಿದ್ದು ಸರ್ವಾವಸ್ಥಾನಿಯಾಮಕನಾಗಿರುವನು. ಅವರು ಶ್ರೀಹರಿಯನ್ನು ತಿಳಿದಿಲ್ಲ. ಶ್ರೀಹರಿ ಅವರನ್ನು ಪೂರ್ಣವಾಗಿ ತಿಳಿದಿರುವನು. ತನ್ನ ಸನ್ನಿಧಾನದ ಮೂಲಕ ಅವರಿಗೆ ಸುಖ ನೀಡುವ ಶ್ರೀಹರಿ 'ಅಂತರ್ಯಾಮಿ' ಎನಿಸಿರುವನು. ಹೀಗೆ ಶ್ರೀಹರಿಯು ವರುಣ-ಅಗ್ನಿ- ಸೂರ್ಯ-ಚಂದ್ರ-ಗಣಪತಿ-ರುದ್ರ-ಶ್ರದ್ಧಾ-ಪ್ರಾಣ-ಸರಸ್ವತಿ-ವಿರಿಂಚ-ಶ್ರೀದೇವಿಯರಲ್ಲೂ ನಿಯಾಮಕನು. ಇದರಂತೆ ದೇಹಾಭಿಮಾನಿಗಳಾದ ದೇವತೆಗಳಲ್ಲಿ ಶ್ರೀಹರಿಯ ವ್ಯಾಪಾರವನ್ನು ತಿಳಿಯಬೇಕು.

## ಅವಸ್ಥಾತ್ರಯಗಳೂ ಪರಮಾತ್ಮನ ಅಧೀನ

ಕನಸಿನಲ್ಲಿ ನಾವು, ವಿಶಾಲವಾದ ಹೆದ್ದಾರಿಗಳು ರಥ, ಕುದುರೆ ಆತ್ಮೀಯ ವ್ಯಕ್ತಿಗಳನ್ನೆಲ್ಲ ಮನಸ್ಸಿನಿಂದ ನೋಡುತ್ತೇವೆ. ವಸ್ತುಗಳ ಸಂದರ್ಶನ ಮತ್ತು ಅನುಭವದಲ್ಲಿ ನಮಗೆ ಸ್ವಾತಂತ್ರ್ಯವಿಲ್ಲ. ಜೀವನು ಅನುಭವಿಸಿದ-ಕೇಳಿದ-ತಿಳಿದ ವಿಷಯಗಳ ಸಂಸ್ಕಾರವು ಅನಾದಿ ಮನಸ್ಸಿನಲ್ಲಿದೆ. ಅದನ್ನು ಪರ್ಮಾತ್ಮನು ಉಪಾದಾನವನ್ನಾಗಿಸಿಕೊಂಡು ತನ್ನ ಇಚ್ಛಾಶಕ್ತಿಯಂತೆ ಜೀವನಿಗೆ ಮನಸ್ಸಿನ ಮೂಲಕ ಅನೇಕ ಪದಾರ್ಥಗಳ ಅರಿವು ನೀಡುವನು. ಇದನ್ನೇ 'ಸ್ವಪ್ನ' ಎನ್ನುವರು. ಇದರಂತೆ 'ಪ್ರಾಜ್ಞ'ನಾಮಕ ಪರಮಾತ್ಮನ ರೂಪದ ಸನಿಹದಲ್ಲಿರುವ ಜೀವನು ಗಾಢ ನಿದ್ರೆಯನ್ನು ಅನುಭವಿಸುವನು. ಈ ಎರಡೂ ಅವಸ್ಥೆಗಳು ಜೀವನ ನಿಯಂತ್ರಣದಲ್ಲಿಲ್ಲ. ಇದರಂತೆ ಎಚ್ಚರವೂ ಜೀವನ ಹಿಡಿತದಲ್ಲಿಲ್ಲ. ಹೀಗೆ ಮೂರು ಅವಸ್ಥೆಗಳಲ್ಲಿ ಮತ್ತು ಮುಕ್ತಿಯಲ್ಲೂ ಪ್ರೇರಕನಾದವ ಶ್ರೀಹರಿ.

## ಎಲ್ಲ ಅವನಿಗಾಗಿ

ಸಾಧಕನ ಅಧ್ಯಯನ-ಯಜ್ಞ-ದಾನ-ತಪಸ್ಸು-ಉಪವಾಸಾದಿ ವ್ರತಗಳು ಪರಮಾತ್ಮನ ಅರಿವಿಗಾಗಿ. ಅದೇ ಒಂದು ದೊಡ್ಡ ಸಂಪತ್ತು. ಅವನ ಅರಿವಿನಿಂದಲೇ ಮುಕ್ತಿ. ಪರಮಾತ್ಮನ ಮಹಿಮೆಯರಿತ ಸಾಧಕನಿಗೆ ಉಳಿದೆಲ್ಲ ವಸ್ತು ಸುಖರೂಪ ಅಥವಾ ಸುಖಸಾಧನವೆನಿಸದು. ಅವರು ಹೆಂಡತಿ-ಮಕ್ಕಳು-ಸಂಪತ್ತಿನ ಮೇಲಿನ ಮೋಹ ತೊರೆದು 'ಸನ್ಯಾಸ'ದೀಕ್ಷೆ ಪಡೆಯುವರು. ಶ್ರೀಹರಿಯು ಬ್ರಹ್ಮಾದಿ ದೇವತೆಗಳಂತಲ್ಲ. ಶ್ರೀದೇವಿಗಿಂತಲೂ ಹಿರಿದಾದ ಮಾಹಾತ್ಮ್ಯವುಳ್ಳವ. ಅವನನ್ನು ಯಾರೂ ಹಿಂಸಿಸಲಾರರು. ಪೂರ್ಣವಾಗಿ ಅರಿಯಲೂ ಆರರು. ಅವನಿಗೆ ಕರ್ಮಬಂಧನವಿಲ್ಲ. ಯಾರು ದ್ವಂದ್ವಸಹಿಷ್ಣುವೂ ಯಥಾರ್ಥಜ್ಞಾನಿಯೂ ಆಗಿದ್ದು ವಿಷ್ಣುವಿನ ವಿಶಿಷ್ಟ ಗುಣಗಳನ್ನು ಉಪಾಸಿಸುವನೋ ಅವನು ಸಕಲ ಪಾಪಗಳನ್ನು ಕಳೆದುಕೊಳ್ಳುವನು.

## ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ

ಯಾವುದೇ ವಸ್ತುಗಳು ನಮಗೆ ಸುಖ ನೀಡುವಲ್ಲಿ ಆಯಾ ವಸ್ತುಗಳಲ್ಲಿರುವ ಶ್ರೀಹರಿಯ ಇಚ್ಛೆಯೇ ಪ್ರಧಾನವಾಗಿದೆ. ವಸ್ತುಗಳಿಂದ ಸುಖ-ಶಾಂತಿ ದೊರಕಲು ಆಯಾ ವಸ್ತುಗಳಲ್ಲಿರುವ ಅಭಿಮಾನಿ ದೇವತೆಗಳ ಪಾತ್ರವೂ ನಗಣ್ಯವಾಗಿದೆ. ಶ್ರೀಹರಿಯ ಇಚ್ಛೆಯೇ ಎಲ್ಲ ಭೌತಿಕ ಸುಖ ಮತ್ತು ಮುಕ್ತಿಸುಖಗಳ ಸಾಧನವೆಂಬ ಸತ್ಯವನ್ನು ಅರಿತಮೇಲೆ ಅವನನ್ನು ಒಲಿಸಿಕೊಳ್ಳಲು ತ್ಯಾಗದ ಬದುಕು-ತತ್ತ್ವಜ್ಞಾನಸಂಪಾದನೆ ಅನಿವಾರ್ಯ. ಶ್ರವಣ- ಮನನಗಳೇ ಶ್ರೀಹರಿಯ ಸಾಕ್ಷಾತ್ಕಾರಕ್ಕೆ ಮೂಲ ಕಾರಣವಾಗಿವೆ. ಅವನ ಅರಿವನ್ನು ಸಂಪಾದಿಸಿದರೆ ಉಳಿದೆಲ್ಲ ವಸ್ತುಗಳ ತಿಳಿವಿನಿಂದ ಬರುವ ಫಲ ತಾನಾಗಿಯೇ ದೊರಕುವುದು. ಪುಟ್ಟ ಬಾವಿ(ಕೂಪ)ದಿಂದಾಗುವ ಪ್ರಯೋಜನವು ವಿಶಾಲ ಸರೋವರದಿಂದ ಆಗದಿರುವುದೆ?

## ದ-ದ-ದ

ಉಪನಿಷತ್ತಿನಲ್ಲಿ ಪ್ರಮುಖ ಗಮನಾರ್ಹವಾದುದು ಮೂರು ವರ್ಗಕ್ಕೆ ನೀಡಿದ ಸಾರ್ವಕಾಲಿಕ ಸಂದೇಶ. ಚತುರ್ಮುಖನ ಮಕ್ಕಳಾದ ದೇವತೆಗಳು-ಮಾನವರು- ದಾನವರು ಶಿಷ್ಯವೃತ್ತಿ ಕೈಗೊಂಡು ಚತುರ್ಮುಖನ ಬಳಿ ಸೇವೆಗೈದರು. ಉಪದೇಶಕ್ಕಾಗಿ ಬಿನ್ನವಿಸಿದರು. ಮೂವರಿಗೂ ಚತುರ್ಮುಖನು ಒಂದೇ 'ದ' ಎಂಬ ಅಕ್ಷರ ಉಪದೇಶಿಸಿದನು. ದೇವತೆಗಳನ್ನು ಬ್ರಹ್ಮ ಕೇಳಿದ–ಅರ್ಥವಾಯಿತೆ? ದೇವತೆಗಳು ಮರುನುಡಿದರು. 'ದ= ದಾಮ್ಯತ' ಇಂದ್ರಿಯ ನಿಗ್ರಹಸಂಪನ್ನರಾಗಿ ನಿರಹಂಕಾರಿಗಳಾಗಿರಿ ಎಂಬುದು ನಿಮ್ಮ ಆದೇಶ. ನಾವು ದೇವತೆಗಳು ಸಕಲೈಶ್ವರ್ಯ ಯೌವನಾದಿ ಗುಣಸಂಪನ್ನರು. ಆದ್ದರಿಂದಲೇ ಅಹಂಕಾರಕ್ಕೆ ಆಸರೆ ಇದೆ. ಅದನ್ನು ತಳೆಯದೇ ಸಂಯಮದಿಂದಿರಲು ತಮ್ಮ ಉಪದೇಶ. ಬ್ರಹ್ಮದೇವರು ತಿಳಿವನ್ನು ಅನುಮೋದಿಸಿದರು.

ಅನಂತರ ಮಾನವರು ಬಂದರು. ಅವರು ತಮ್ಮ ತಿಳಿವನ್ನು ಸ್ಫುಟಪಡಿಸಿದರು–ನಾವು ಲೋಭಿಗಳು. ಪರಮಾತ್ಮ ನೀಡಿದ ಸಂಪತ್ತಿಯಲ್ಲಿ 'ಸ್ವಲ್ಪ ಕೊಟ್ಟು ತಿನ್ನಿ–ದಾನ ಮಾಡಿರಿ' ಎಂಬುದು ತಮ್ಮ ಆದೇಶ. ಬ್ರಹ್ಮದೇವರು ಅಂಗೀಕರಿಸಿದರು.

ಅಸುರರು, ತಮ್ಮ ಕ್ರೂರ ಸ್ವಭಾವ ತ್ಯಜಿಸಿ 'ದಯಾ' ಗುಣ ರೂಢಿಸಿಕೊಳ್ಳಲು ತಮ್ಮ ಉಪದೇಶವೆಂದರು. ಬ್ರಹ್ಮದೇವರು ಒಪ್ಪಿ ಎಲ್ಲರನ್ನೂ ಕಳುಹಿದರು. ಉಪನಿಷತ್ತು ನಮಗೆ ನೀಡುವ ಈ ಸಾರ್ವಕಾಲಿಕ ಸಂದೇಶ ಸದಾ ಗಮನಾರ್ಹವಾಗಿದೆ. ನಮ್ಮ ಕರ್ತವ್ಯ ಕರ್ಮಗಳಂತೆ ದಾನವೂ ನಮ್ಮ ಬದುಕಿನ ಅವಿಭಾಜ್ಯ ಅಂಗವಾಗಬೇಕು.

## ತಂದೆಯ ಉಪದೇಶ

ಆರ್ಷ ಸಾಹಿತ್ಯದ ಅಧ್ಯಯನ-ಅನುಷ್ಠಾನಗಳಿಂದ ಬದುಕು ನಡೆಸಿದ ಸಾಧಕನು, ಮರಣದ ಸೂಚನೆಗಳು ದೊರೆತಾಗ, ಮಗನನ್ನು ಕರೆದು ಉಪದೇಶಿಸಬೇಕು–'ನೀನು ಬ್ರಹ್ಮ' 'ನೀನು ಯಜ್ಞ' 'ನೀನು ಲೋಕ' ಎಂಬುದಾಗಿ. ಆಗ ಪುತ್ರನು 'ನಾನು ಬ್ರಹ್ಮ' 'ನಾನು ಯಜ್ಞ' 'ನಾನು ಲೋಕ' ಎಂದು ಮಾರುತ್ತರಿಸಬೇಕು.

ತಂದೆಯ ಉಪದೇಶದ ಹಿನ್ನೆಲೆ ಹೀಗಿದೆ–'ನಾನು ಈವರೆಗೆ ವೇದಶಾಸ್ತ್ರಗಳನ್ನು ಪಠಿಸಿ ಉಪದೇಶಿಸುತ್ತ ಅಧ್ಯಾತ್ಮದಲ್ಲಿ ಮುಳುಗಿ ಬದುಕು ನಡೆಸಿದೆ. ಅನೇಕ ಯಜ್ಞಗಳನ್ನು ಮಾಡಿದೆ. ಮುಕ್ತ ಲೋಕವನ್ನು ಸಂಪಾದಿಸುವ ಪ್ರಯತ್ನ ಮಾಡಿದೆ. ನೀನು ಕೇವಲ ನನ್ನ ಸಂಪತ್ತಿಗೆ ವಾರಸುದಾರನಲ್ಲ. ನನ್ನ ಭೌತಿಕ ಸಂಪತ್ತನ್ನು ಪಡೆಯುವಾಗ (ಉಪಭೋಗಿಸುವಾಗ) ನಾನು ಅನುಷ್ಠಾನಕ್ಕೆ ತಂದ ವೇದ-ಶಾಸ್ತ್ರ-ಪಾಠ-ಪ್ರವಚನವನ್ನು ತೊರೆಯದಿರು. ಸತ್ಕರ್ಮಾನುಷ್ಠಾನವನ್ನು ಬಿಡದಿರು. ಮುಕ್ತ ಲೋಕಗಳನ್ನು ಪಡೆಯುವ ಸಾಧನೆ ಮುಂದುವರೆಯಲಿ. ತಂದೆ ಈ ಹಿತನುಡಿಗೆ ಮಗನು ಸ್ಪಂದಿಸಿ ತಂದೆಗೆ ವಚನ ನೀಡಬೇಕು–ತಮ್ಮ

ಆದೇಶದಂತೆ ನಾನು ವೇದ-ಶಾಸ್ತ್ರ-ಪಾಠ-ಪ್ರವಚನವನ್ನು ಮೈಗೂಡಿಸಿಕೊಳ್ಳುವೆ. ಸತ್ಕರ್ಮಗಳನ್ನು ಮುಂದುವರೆಸುವೆ. ಉತ್ತಮ ಲೋಕಗಳನ್ನು ಸಂಪಾದಿಸುವೆ.

ನಮ್ಮ ಋಷಿಗಳು ನೀಡಿದ ಅಮೂಲ್ಯ ಸಾರ್ವಕಾಲಿಕ ಉಪದೇಶವಿದು. ಭೌತಿಕ ಸಂಪತ್ತಿನ ಅಭಿವೃದ್ಧಿಯ ದುಷ್ಪರಿಣಾಮಗಳನ್ನು ಗಮನಿಸಿದ ಜ್ಞಾನಿಗಳು ಅದರತ್ತ ಗಮನ ಹರಿಸದೇ ಆತ್ಮೋನ್ನತಿ ಹಾಗೂ ಸಮಾಜದ ಸರ್ವಾಂಗೀಣ ಉನ್ನತಿಗೆ ಕಾರಣವಾದ ಜ್ಞಾನ-ಸತ್ಕರ್ಮಗಳ ಪರಂಪರೆಯ ಅಭಿವೃದ್ಧಿಯ ಆದೇಶ ನೀಡಿದರು. ಜ್ಞಾನದ ಬೆಳಕು-ಪ್ರಾಮಾಣಿಕ ನಡೆ ಮಾತ್ರ ವ್ಯಕ್ತಿಗತ ಹಾಗೂ ಸಾಮಾಜಿಕ ಪ್ರಗತಿಗೆ ಸಾಧನವಾಗಬಲ್ಲದು ಎಂಬ ಜ್ವಲಂತ ಸತ್ಯ ಇಲ್ಲಿ ಅನುಸಂಧೇಯವಾಗಿದೆ.

### ದುಃಖಾನುಭವವೊಂದು ತಪಸ್ಸು

ನಾವು ಜನ್ಮಾಂತರದಲ್ಲಿ ಮಾಡಿದ ಪಾಪಗಳ ಫಲವಾಗಿ ದುಃಖವನ್ನು ಅನುಭವಿಸುವುದು ಅನಿವಾರ್ಯ. ಇದು ಬೇಡವೆಂದರೂ ನಮ್ಮನ್ನನುಸರಿಸಿ ಬರುವುದು ಖಚಿತ. ಇಂದು ತಪ್ಪಿಸಿಕೊಂಡರೂ ಮುಂದೆ ಹೆಚ್ಚಿನ ದುಃಖಾನುಭವ ತಪ್ಪಿಸಿಕೊಳ್ಳಲಾಗದು. ಈ ಕಟು ಸತ್ಯವನ್ನರಿತು ಒಗಗಿ ಬಂದ ದುಃಖವನ್ನು 'ಹರಿಚಿತ್ತ' ವೆಂದರಿತು ಮೌನವಾಗಿ ಸ್ವೀಕರಿಸುವುದು ತಪಸ್ಸೆನಿಸಿದೆ. ಕರ್ಮಸ್ವಾಮಿಯಾದ ಪರಮಾತ್ಮನು ಕರ್ಮಕ್ಕನುಗುಣವಾಗಿ ನೀಡಿದ್ದ ದುಃಖವನ್ನು ಅವನ ಸ್ಮೃತಿಪೂರ್ವಕವಾಗಿ ಗೌರವದಿಂದ ಸ್ವೀಕರಿಸುವುದು ಉಚಿತವೂ ಆಗಿದೆ. ಇಂತಹ ಅನುಸಂಧಾನ ವುಳ್ಳವನು ವಿಷ್ಣುಲೋಕವನ್ನು ಪಡೆಯುವನು.

### ಹೆಣ ಹೊರುವುದೂ ತಪಸ್ಸು

ಇದಲ್ಲದೇ ದಹನಕ್ಕಾಗಿ ಶವವನ್ನು ಹೊತ್ತುಕೊಂಡೊಯ್ಯುವುದು ಒಂದು ತಪಸ್ಸು. ಅದರಂತೆ ಶವವನ್ನು ಅಗ್ನಿಗೆ ಆಹುತಿಯಾಗಿ ಅರ್ಪಿಸುವ 'ಶವಸಂಸ್ಕಾರ'ವೂ ಒಂದು ತಪಸ್ಸೇ ಆಗಿದೆ. ಈ ಉಪದೇಶದ ಹಿಂದಿನ ಸಾಮಾಜಿಕ ಕಳಕಳಿ ಗಮನಾರ್ಹವಾದುದು. ಪ್ರತಿಯೊಬ್ಬರೂ ಒಂದು ದಿನ 'ಶವ'ವಾಗುವವರೇ. ಯಾರೂ 'ಶವ'ವನ್ನು ಕಂಡು ಅಸಹ್ಯಪಡಬಾರದು. ಅಂತ್ಯಕ್ರಿಯೆ ಅಥವಾ ಶವಹೊರುವ ಕಾರ್ಯದಲ್ಲಿ ಭಾಗವಹಿಸದಿರಬಾರದು. 'ಇದೊಂದು ಪುಣ್ಯಕಾರ್ಯ. ಶವ ಹೊತ್ತು ಇಡುವ ಒಂದೊಂದು ಹೆಜ್ಜೆಗೂ ಯಜ್ಞಾನುಷ್ಠಾನದ ಫಲವಿದೆ ಎನ್ನುತ್ತವೆ ಶಾಸ್ತ್ರಗಳು. ಪ್ರತಿಯೊಂದು ಕ್ರಿಯೆಯ ಹಿಂದೆ ಪರಮಾತ್ಮನ ಸ್ಮರಣೆ, ಫಲಾಪೇಕ್ಷಾರಹಿತವಾದ ಕರ್ತವ್ಯವನ್ನು ಉಪನಿಷತ್ತು ಬೋಧಿಸುತ್ತದೆ. ಈ ಅಂಶಗಳನ್ನು ನಾವು ಸದಾ ಮೆಲಕು ಹಾಕುವ ಮೂಲಕ ವಿಧಾನಾತ್ಮಕ ಬದುಕಿನತ್ತ ಸಾಗಬೇಕು.

### ಎಂತಹ ಮಕ್ಕಳು ಬೇಕು?

ಗಂಡು ಹೆಣ್ಣು ಬೆರೆಯುವುದು ಪಶು-ಪಕ್ಷಿಗಳಲ್ಲಿದೆ. ಸಂತತಿಯ ಅಭಿವೃದ್ಧಿಯೇ ದೊಡ್ಡ ಸಾಧನೆಯಲ್ಲ. ಸಮಾಜಕ್ಕೆ ಬೆಳಕು ನೀಡಬಲ್ಲ ಆದರ್ಶಗಳ ತವರಾದ ಸಂತತಿ

ಬೆಳೆಸುವುದು ನಿಜವಾದ ಸಾಧನೆ. ಇಂತಹ ಸಂತತಿ ಬೆಳೆಸಲು ಅನುಸಂಧಾನ ಮುಖ್ಯವಾದುದು. ಈ ಬಗ್ಗೆ ಉಪನಿಷತ್ತು ನೀಡುವ ಬೆಳಕು ಅಪೂರ್ವವಾಗಿದೆ. ಹೆಣ್ಣಿನ ಯೋನಿಯೇ ಯಜ್ಞವೇದಿಕೆ. ಅಲ್ಲಿರುವ ರೋಮರಾಶಿಗಳೇ ದರ್ಭೆಗಳು. ಚರ್ಮವೇ ಕೃಷ್ಣಾಜಿನ. ವೃಷಣಗಳೆರಡು ಸೋಮರಸವನ್ನು ಹಿಂಡುವ ಸಾಧನಗಳು. ಯೋನಿಯ ಮಧ್ಯಭಾಗವೇ ಪ್ರಜ್ವಲಿಸುವ ಅಗ್ನಿ. ಅಲ್ಲಿ ರೇತಸ್ಸೆಂಬ ಆಹುತಿಯ ಹೋಮ ನಡೆಯುತ್ತದೆ. ಹೀಗೆ ಪ್ರಜಾಪತಿಯು ಸ್ತ್ರೀಸಂಗ ಮಾಡಿದ ಕ್ರಮ. ಈ ಅನುಸಂಧಾನವಿರುವ ವ್ಯಕ್ತಿ ವಾಜಪೇಯ ಮಹಾಯಾಗ ಫಲವನ್ನು ಪಡೆಯುತ್ತಾನೆ. ಸ್ತ್ರೀಸಂಗವನ್ನು ಹೊರತುಪಡಿಸಿ ಬೇರೆಡೆ ರೇತಸ್ಸಿನ ಸ್ಖಲನವಾಗುವಂತಿಲ್ಲ. ಇದು 'ವಾಮದೇವ ಯಜ್ಞ'ವಾದ ಕಾರಣ ಆಹುತಿಪ್ರಕ್ಷೇಪವು ಸ್ವಸ್ತ್ರೀಯೋನಿಯೆಂಬ ಅಗ್ನಿಯಲ್ಲಿಯೇ ನಡೆಯಬೇಕು. ಭಗವಂತನ ಪ್ರಾರ್ಥನೆಯಿಂದ ಬಯಸಿದ ಪುತ್ರರತ್ನನನ್ನು ಪಡೆಯಬಹುದು.

ಬಿಳಿಯ ಬಣ್ಣದ ಮಗು ಜನಿಸಬೇಕೆಂಬ ಅಪೇಕ್ಷೆ ಇರುವಲ್ಲಿ ಕ್ಷೀರಾನ್ನವನ್ನು ಬೇಯಿಸಿ ಹೋಮಿಸಬೇಕು. ಹೋಮಶೇಷವನ್ನು ದಂಪತಿಗಳು ಸ್ವೀಕರಿಸಬೇಕು. ಇದರಿಂದ ಬಿಳಿಯ ಬಣ್ಣದ ಒಂದು ವೇದವನ್ನು ಅಧ್ಯಯನ ಮಾಡಬಲ್ಲ ಗಂಡು ಮಗು ಜನಿಸುವುದು.

ಇದರಂತೆ ಕೆಂಪು ಬಣ್ಣದ ಮಗು ಜನಿಸಲೆಂಬ ಬಯಕೆ ಇರುವವರು ಮೊಸರನ್ನವನ್ನು ಬೇಯಿಸಿ ಹೋಮ ಮಾಡಬೇಕು. ಆಜ್ಯ(ತುಪ್ಪ)ದೊಂದಿಗೆ ಹುತಶೇಷವನ್ನು ದಂಪತಿಗಳು ಸ್ವೀಕರಿಸಬೇಕು.

ಇನ್ನು ವಿದುಷಿಯಾದ ಮಗಳು ಹುಟ್ಟಲಿ ಎಂಬ ಬಯಕೆ ಇರುವವರು ಎಳ್ಳನ್ನವನ್ನು ಬೇಯಿಸಿ ಹೋಮಿಸಬೇಕು. ಹುತಶೇಷವನ್ನು ತುಪ್ಪದೊಂದಿಗೆ ಭುಂಜಿಸಬೇಕು. ಇದರಿಂದ ಇಂತಹ ಮಕ್ಕಳನ್ನು ಪಡೆಯಲು ಸಾಧ್ಯವಿದೆ.

ಸ್ತ್ರೀಸಂಗವು 'ಯಜ್ಞ'ವಾಗುವುದು ವಿಷ್ಣುಸ್ಮೃತಿಯ ಮೂಲಕ. ಪತ್ನಿಯಲ್ಲಿ ಶ್ರೀದೇವಿ ಮತ್ತು ಭಾರತಿಯ ಸನ್ನಿಧಾನವನ್ನು ಚಿಂತಿಸಬೇಕು. ಪತಿಯಲ್ಲಿರುವ ಹರಿವಾಯುಗಳು ಮಾಡುವ ಸ್ತ್ರೀಸಂಗವನ್ನು ಅನುಸಂಧಾನ ಮಾಡಬಲ್ಲವನಿಗೆ 'ಪುತ್' ಎಂಬ ನರಕದಿಂದ ಬಿಡುಗಡೆ ನೀಡಬಲ್ಲ ಮಗನು ಹುಟ್ಟುವನು. ಈ ಸಂದರ್ಭದಲ್ಲಿ ಮಾಡಬೇಕಾದ ದೇವತಾಪ್ರಾರ್ಥನೆ, ಹೋಮವಿಧಿಮಂತ್ರ ಇತ್ಯಾದಿಗಳ ಬಗ್ಗೆ ಉಪನಿಷತ್ತು ಅತ್ಯಂತ ಉಪಯುಕ್ತ ವಿವರಣೆ ನೀಡಿದೆ. ಈ ಮೌಲಿಕ ಅಂಶಗಳು ಎಲ್ಲ ಕಾಲದ ಸಾಧಕರಿಗೂ ಅನುಸಂಧೇಯವಾಗಿದೆ.

ಹೀಗೆ ಉಪನಿಷತ್ತಿನಲ್ಲಿ ಸಾರ್ವಕಾಲಿಕ ಹಾಗೂ ಉಪಯುಕ್ತ ಸಂಗತಿಗಳನ್ನು ಸಾಧಕರು ಗಮನಿಸಬಹುದಾಗಿದೆ.

# ಕೆಲವು ಶ್ರುತಿಗಳ ವಿವರಣೆ

## ಅಹಂ ಬ್ರಹ್ಮಾಸ್ಮಿ

ಈ ಉಪನಿಷತ್ತಿನಲ್ಲಿ ಬರುವ ಕೆಲವು ವಾಕ್ಯಗಳಿಗೆ ಮೇಲುನೋಟಕ್ಕೆ ತಪ್ಪು ಅರ್ಥ ಆಗುವ ಸಂಭವ ಇದೆ. ಅಂತಹ ವಾಕ್ಯಗಳಿಗೆ ಸಮಂಜಸವಾದ ವಿವರಣೆಯನ್ನು ಭಾಷ್ಯ–ಖಂಡಾರ್ಥಗಳ ಬೆಳಕಿನಲ್ಲಿ ನಾವು ಕಾಣಬಹುದಾಗಿದೆ. ಪ್ರಕೃತ 'ಅಹಂ ಬ್ರಹ್ಮಾಸ್ಮಿ' (3.5.4) ಎಂಬ ವಾಕ್ಯವನ್ನು ಗಮನಿಸಿ. ಶ್ರೀಶಂಕರಾಚಾರ್ಯರು ಚತುರಾಮ್ನಾಯ ಪೀಠದ ಗುರುಗಳಿಗೆ ಉಪದೇಶಿಸಿದ ಮಹಾವಾಕ್ಯಗಳಲ್ಲಿ ಇದೊಂದಾಗಿದೆ. ಇದರ ಅರ್ಥ ಹೀಗೆ ಕಾಣುತ್ತದೆ–'ಅಹಂ'=ನಾನು (ಜೀವನು), 'ಬ್ರಹ್ಮ'=ಪರಬ್ರಹ್ಮನು, 'ಅಸ್ಮಿ'= ಆಗಿರುತ್ತೇನೆ. ಇದು ಜೀವ-ಬ್ರಹ್ಮ ಅಭೇದವನ್ನು ಉಪದೇಶಿಸುವಂತೆ ಕಾಣುತ್ತದೆ. ಆದರೆ ಉಪನಿಷತ್ತಿನ ಈ ಪ್ರಕರಣದ ಅನುವಾದವನ್ನು ಗಮನಿಸಿ.

''ಬ್ರಹ್ಮನೊಬ್ಬನೇ ಸೃಷ್ಟಿಯ ಮೊದಲು ಇದ್ದನು. ಅವನು ತನ್ನ ಬಗ್ಗೆ ಹೀಗೆ ಆಲೋಚಿಸಿದನು. ನಾನು ಎಲ್ಲ ಹುಟ್ಟಲಿರುವ ವಸ್ತುಗಳೊಳಗೆ ಅಂತರ್ಯಾಮಿಯಾಗಿ ಇರುವವ. ಯಾರಿಂದಲೂ ತ್ಯಾಜ್ಯನಲ್ಲ–'ಅಹಮ್'. ಗುಣಪರಿಪೂರ್ಣನಾದುದ ರಿಂದ– 'ಬ್ರಹ್ಮ'. ಯಾವಾಗಲೂ ಅವಿಕಾರಿಯಾಗಿ ಇರುವ ಕಾರಣ–'ಅಸ್ಮಿ'.

ಇಂತಹ ಉಪಾಸನೆಯಿಂದ ದೇವತೆಗಳು ತಮ್ಮ ಯೋಗ್ಯತಾನುಗುಣವಾದ ಪೂರ್ಣತೆಯನ್ನು ಪಡೆದರು. ವಾಮದೇವನೆಂಬ ಋಷಿಯೂ ಕೂಡ 'ಅಹಂ ಮನುರಭವಂ ಸೂರ್ಯಶ್ಚ' ಎಂಬ ಮಂತ್ರದಿಂದ ಪರಮಾತ್ಮನ ಸರ್ವಾಂತ-ರ್ಯಾಮಿತೆಯ ತತ್ತ್ವವನ್ನು ಕಂಡನು. ಹೀಗೆ ಉಪಾಸನೆ ಮಾಡುವ ವ್ಯಕ್ತಿಗಳು ತಮ್ಮ ಯೋಗ್ಯತಾನುಗುಣವಾದ ಆನಂದದ ಅಭಿವ್ಯಕ್ತಿಯನ್ನು ಹೊಂದುವರು''

ಈ ಭಾಗವನ್ನು ಅಭ್ಯಾಸಮಾಡುವಾಗ ಜೀವನ ಪ್ರಸಕ್ತಿಯು ಇಲ್ಲದಿರುವುದು ಗಮನಾರ್ಹ. ಬ್ರಹ್ಮನು ತನ್ನ ಗುಣಗಳನ್ನು ತಾನೇ ಅನುಸಂಧಾನಮಾಡಿದ ಚಿತ್ರಣ ಇಲ್ಲಿದೆ. 'ಅಹಂ' ಎಂಬ ಶಬ್ದದಿಂದ ಜೀವನನ್ನು ತೆಗೆದುಕೊಳ್ಳಲು ಸಾಧ್ಯವಾಗದು. ಏಕೆಂದರೆ ಅವಿದ್ಯೆಯಿಂದ ಕೂಡಿದ ಚೇತನನನ್ನೇ ಅದ್ವೈತವಾದವು 'ಜೀವ' ಎಂದು ಕರೆಯುತ್ತದೆ. ಇಂತಹ ವಿಶಿಷ್ಟ ಚೇತನವು ಅಂತಿಮ ಸತ್ಯವಲ್ಲ. ಅವಿದ್ಯೆಯನ್ನು ಕಳೆದುಕೊಂಡಾಗ ಉಳಿಯುವ ಶುದ್ಧ ಚೈತನ್ಯವೇ ಪರಮಸತ್ಯ. ನಿರ್ಗುಣವಾದ ಚೈತನ್ಯಕ್ಕೆ ಮಾಯೆಯ ಸಂಪರ್ಕವಾದಾಗ, ಅದು 'ಸಗುಣಬ್ರಹ್ಮ'ನೆನಿಸಿ ಸೃಷ್ಟಿ ನಡೆಸುವುದು. ಸಗುಣಬ್ರಹ್ಮವು ಅಂತಿಮ ಸತ್ಯವಲ್ಲ. ಮಾಯೆಯಿಂದ ವಿದೂರವಾದ ಚೈತನ್ಯಾಂಶಕ್ಕೂ ಜೀವ ಎಂಬ ವಿಶಿಷ್ಟ ವಸ್ತುವಿನಲ್ಲಿರುವ ಶುದ್ಧ ಚೈತನ್ಯಕ್ಕೂ ಅಭೇದವನ್ನು ಶಾಸ್ತ್ರಗಳು ಬೋಧಿಸುತ್ತವೆ ಎಂದು ಅದ್ವೈತ ಗ್ರಂಥಗಳಲ್ಲಿ ವಿವರಿಸಲಾಗಿದೆ. ಎರಡು ಶುದ್ಧ

ಚೈತನ್ಯಗಳಿಗೆ ಐಕ್ಯವನ್ನು 'ಅಹಂ ಬ್ರಹ್ಮಾಸ್ಮಿ' ಎಂಬ ವಾಕ್ಯವು ಬೋಧಿಸಿದಲ್ಲಿ ಜೀವ-ಬ್ರಹ್ಮರ ಅಭೇದವು ಸಿದ್ಧವಾಗಲಾರದು. 'ಅಹಂ' 'ಬ್ರಹ್ಮ' ಎಂಬ ಎರಡು ಪದಗಳಿಗೆ ಲಕ್ಷಣಾಶ್ರಯಣವೂ ಅನುಚಿತವಾಗುವುದು.

ಆದ್ದರಿಂದ 'ಅಹಂ' ಎಂದರೆ ನನ್ನ ಅಂತರ್ಯಾಮಿಯಾಗಿರುವ ಪರಮಾತ್ಮನು ಗುಣಪೂರ್ಣನಾದುದರಿಂದ 'ಬ್ರಹ್ಮ'ನೆನಿಸಿ ನಿತ್ಯವೂ ಅವಿಕಾರಿಯಾಗಿಯಾಗಿರುವುದರಿಂದ 'ಅಸ್ಮಿ' ಎನಿಸಿದೆ ಎಂಬುದಾಗಿ ಅರ್ಥ ಹೇಳುವುದು ಸಮುಚಿತವಾಗಿದೆ. 'ಅಹಂ' ಶಬ್ದಕ್ಕೆ ಜೀವಾಂತರ್ಯಾಮಿ ಎಂಬ ಅರ್ಥ ಹೇಳುವುದು ಸ್ಮೃತಿಗೆ ಅನುಗುಣವಾಗಿದೆ–

ಸರ್ವಾಂತರ್ಯಾಮಿಕೋ ವಿಷ್ಣುಃ ಸರ್ವನಾಮ್ನಾಽಭಿಧೀಯತೇ ।
ಏಷೋಽಹಂ ತ್ವಮಸೌ ಚೇತಿ ನ ತು ಸರ್ವಸ್ವರೂಪತಃ ॥

ಈ ಪ್ರಮಾಣವಚನವು ಭಗವಂತನು ಎಲ್ಲರ ಅಂತರ್ಯಾಮಿಯಾಗಿದ್ದು 'ಅಹಂ' 'ಏಷಃ' 'ತ್ವಮ್' ಇತ್ಯಾದಿಶಬ್ದವಾಚ್ಯನೆಂದು ಸಾರುತ್ತಿದೆ.

ಅದ್ವೈತವನ್ನು ಈ ವಾಕ್ಯದಲ್ಲಿ ಕಾಣುವವರಿಗೆ ಈ ಪ್ರಕರಣದ ಕೊನೆಯಲ್ಲಿರುವ 'ತದ್ಯೋಯೋ ದೇವಾನಾಂ ಪ್ರತ್ಯಬುಧ್ಯತ ತಥಾ ಋಷೀಣಾಂ ತಥಾ ಮನುಷ್ಯಾಣಾಮ್' ಎಂಬ ಭೇದವನ್ನು ಸಮರ್ಥಿಸುವ ವಾಕ್ಯವಿರೋಧವು ಪರಿಹಾರ್ಯವಾಗುವುದು. ಈ ವಾಕ್ಯವು ದೇವತೆಗಳಲ್ಲಿ, ಋಷಿಗಳಲ್ಲಿ ಮತ್ತು ಮನುಷ್ಯರಲ್ಲಿ ಇಂತಹ ಗುಣಪೂರ್ಣನಾದ ಬ್ರಹ್ಮಸ್ವರೂಪ ಜ್ಞಾನವುಳ್ಳವನು ಯಥಾಯೋಗ್ಯ ಪೂರ್ಣತೆಯನ್ನು ಪಡೆಯು-ವನೆಂದು ತಿಳಿಸುತ್ತ ಭೇದವನ್ನೇ ಎತ್ತಿ ಹಿಡಿದಿದೆ.

'ಅಹಂ ಮನುರಭವಂ ಸೂರ್ಯಶ್ಚ' ಎಂಬ ವಾಮದೇವನ ದರ್ಶನವೂ ಅದ್ವೈತ ಸಾಧಕವಲ್ಲ. ಮನುವಿಗೂ ಸೂರ್ಯನಿಗೂ ವಾಮದೇವನಿಗೂ ಅಭೇದವು ಪ್ರತ್ಯಕ್ಷಬಾಧಿತ. ಇಲ್ಲಿರುವ ಶುದ್ಧ ಚೈತನ್ಯಗಳಿಗೆ ಅಭೇದವನ್ನು ಈ ವಾಕ್ಯ ಹೇಳುವುದಾದರೆ 'ಅಭವಂ' ಎಂಬ ಉತ್ತಮಪುರುಷ ಪದಪ್ರಯೋಗವು, 'ಅಹಂ ಭೂಮಿಮದದಾಮಾರ್ಯಾಯ' ಎಂಬ ವಾಕ್ಯವು ತಿಳಿಸುವ ಭೂದಾನವೂ ಉಪಪನ್ನವಾಗಲಾರದು. ಶುದ್ಧ ಚೈತನ್ಯವು ಆರ್ಯನಿಗೆ ಭೂಮಿಯನ್ನು ನೀಡಿಲ್ಲವಷ್ಟೆ! ಮಹಾವಿಷ್ಣುವು ವಾಮನರೂಪ ತಳೆದು ಇಂದ್ರನಿಗೆ ಭೂಮಿಯನ್ನು ನೀಡಿದ ಕಥೆ ಪ್ರಸಿದ್ಧವಷ್ಟೆ! ಆದ್ದರಿಂದ 'ಅಹಂ' ಎಂಬ ರಹಸ್ಯ ನಾಮವು ಮಹಾವಿಷ್ಣುವನ್ನೆ ತಿಳಿಸುತ್ತಿದೆ. ಇಲ್ಲಿ 'ಅಹಂ' ಶಬ್ದದಿಂದ ಜೀವನನ್ನು ತೆಗೆದುಕೊಳ್ಳದಿರುವುದು ಸೂಕ್ತವಾಗಿದೆ.

'ಅಹಂ ಮನುರಭವಂ ಸೂರ್ಯಶ್ಚಾಹಂ ಕಕ್ಷೀವಾನ್ ಋಷಿರಸ್ಮಿ ವಿಪ್ರಃ' (ಋಗ್ವೇದ 3.6.15) ಎಂಬ ಮಂತ್ರದ ಅರ್ಥವನ್ನು ಹೀಗೆ ವಿವರಿಸಬಹುದು. ನನ್ನ (ವಾಮದೇವನ) ಅಂತರ್ಯಾಮಿಯು ಜ್ಞಾನರೂಪಿಯಾಗಿದ್ದು 'ಮನು' ಎನಿಸಿ ಮನುವಿನ ಒಳಗೆ ನಿಯಾಮಕನಾಗಿರುವನು. ಜ್ಞಾನಿಗಳಿಂದ ಹೊಂದಲ್ಪಡುವ ಕಾರಣ 'ಸೂರ್ಯ'ನೆನಿಸಿದ್ದು

ಸೂರ್ಯನ ಅಂತರ್ಯಾಮಿಯಾಗಿರುವನು. ವನವಾಸಿಗಳಿಂದ ಆರಾಧ್ಯನಾಗಿ 'ಕಕ್ಷೀವಾನ್' ಎನಿಸಿದ್ದು 'ಕಕ್ಷೀವಾನ್' ಎಂಬ ಋಷಿಯಲ್ಲಿ ಅಂತರ್ಯಾಮಿಯಾಗಿರುವನು. ಹೀಗೆ ಈ ಮಂತ್ರದ ಅಭಿಪ್ರಾಯವನ್ನು ಗಮನಿಸಬಹುದಾಗಿದೆ.

## ಇದಂ ಸರ್ವಂ ಯದಯಮಾತ್ಮಾ (4.4.6)

ಮೇಲಿನ ಶ್ರುತಿಯು ಸಮಗ್ರ ಜೀವಜಡಾತ್ಮಕ ಪ್ರಪಂಚವು ಬ್ರಹ್ಮಸ್ವರೂಪವೆಂದು ತಿಳಿಸುವುದು. ಆದರೆ ಬ್ರಹ್ಮನಿಗೂ, ಜೀವ-ಜಡರಿಗೂ ಐಕ್ಯವು ಅಸಂಭಾವಿತ. ಆದ್ದರಿಂದ ಅದ್ವೈತವಾದಿಗಳು ಈ ಮಂತ್ರಖಂಡದ ಅರ್ಥವನ್ನು ಹೀಗೆ ವಿವರಿಸಿದರು–ಇರುವುದು ಶುದ್ಧ ಚೇತನ ಮಾತ್ರ. ಜೀವ-ಜಡಾತ್ಮಕ ವಿಶ್ವವೆಲ್ಲ ಅದರಲ್ಲಿ ಆರೋಪಿತ. ಚಿಪ್ಪಿನಲ್ಲಿ ಬೆಳ್ಳಿ ಕಾಣಿಸುವಂತೆ ಚೈತನ್ಯದಲ್ಲಿ ಈ ವಿಶ್ವವು ಕಾಣುತ್ತಿದ್ದು ಇದು ಸತ್ಯವಲ್ಲ. ಹೀಗೆ ಈ ವಾಕ್ಯವು ವಿಶ್ವಮಿಥ್ಯಾತ್ವಸಾಧಕವೆಂದು ಅದ್ವೈತಿಗಳ ಆಶಯವಾಗಿದೆ.

ಈ ವಿಶ್ಲೇಷಣೆಯು ಸೂಕ್ತವೆನಿಸಲಾರದು. 'ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬ ಶ್ರುತಿಯು ಎಲ್ಲ ಜೀವ-ಜಡಾತ್ಮಕ ವಿಶ್ವದಲ್ಲಿ ನಿಯಾಮಕವಾಗಿರುವುದನ್ನು ಬ್ರಹ್ಮತತ್ತ್ವವೆಂದು ತಿಳಿಸುತ್ತಿದೆ. ವಿಶ್ವವು ಅಸತ್ಯವಾದರೆ ಅಲ್ಲಿ ಬ್ರಹ್ಮನು ನಿಯಾಮಕನಾಗಿರಲು ಸಾಧ್ಯವಿಲ್ಲ. ಆದ್ದರಿಂದ 'ಎಲ್ಲ ನೀರು ಉಪ್ಪಾಗಿದೆ'(ಸರ್ವಂ ಜಲಂ ಲವಣಮ್) ಎಂದರೆ ನೀರಲ್ಲಿ ಉಪ್ಪು ವ್ಯಾಪಿಸಿದೆ ಎಂದು ಅರ್ಥ. ಹೀಗೆ 'ಸರ್ವಂ ಆತ್ಮಾ' ಎಂಬ ವಾಕ್ಯಕ್ಕೂ ಜೀವ-ಜಡಾತ್ಮಕ ವಿಶ್ವದಲ್ಲಿ ಬ್ರಹ್ಮನು ವ್ಯಾಪ್ತನೆಂದು ಅರ್ಥ ಮಾಡಿಕೊಳ್ಳಬಹುದಾಗಿದೆ.

'ಸ ಹಿ ಸರ್ವಸ್ಯ ಕರ್ತಾ' ಎಂಬುದಾಗಿ ಶ್ರುತಿಯು ಎಲ್ಲ ಕ್ರಿಯೆಗಳ ಮೂಲನು ಬ್ರಹ್ಮನೆಂದು ವಿವರಿಸುತ್ತಿದೆ. ಬ್ರಹ್ಮನು ಎಲ್ಲ ಕ್ರಿಯೆಗಳ ನಿಮಿತ್ತಕಾರಣನೆಂದು ಇದರ ಅರ್ಥವಾಗಿದೆ. 'ಆಯುರ್ವೈ ಘೃತಮ್'(ತುಪ್ಪವು ಆಯುರ್ವೃದ್ಧಿಕಾರಕ), 'ಬ್ರಾಹ್ಮಣೋಽಸ್ಯ ಮುಖಮ್' (ಬ್ರಾಹ್ಮಣನು ಪರಮಾತ್ಮನ ಮುಖದಿಂದ ಜನಿಸಿರುವನು) ಇತ್ಯಾದಿ ಉದಾಹರಣೆಗಳಲ್ಲಿ ತುಪ್ಪವು ಆಯುಷ್ಯದ ವೃದ್ಧಿಗೆ ನಿಮಿತ್ತವೆಂದು, ಬ್ರಾಹ್ಮಣನ ಉತ್ಪತ್ತಿಗೆ ಪರಮಾತ್ಮನ ಮುಖವು ನಿಮಿತ್ತವೆಂದು ಅರ್ಥ ಮಾಡಿಕೊಳ್ಳುವಂತೆ 'ಇದಲ್ಲ ಬ್ರಹ್ಮವೆಂಬ' ಮಾತಿಗೂ ಜೀವಜಡಾತ್ಮಕ ವಿಶ್ವದ ಉತ್ಪತ್ತಿಗೆ ಬ್ರಹ್ಮನು ನಿಮಿತ್ತಕಾರಣನೆಂದು ಅರ್ಥಮಾಡಿಕೊಳ್ಳಬಹುದಾಗಿದೆ.

'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮ್' ಎಂಬ ಶ್ರುತಿಯು ಬ್ರಹ್ಮನು ಸರ್ವಾಧಾರನೆಂದು ತಿಳಿಸುತ್ತಿದೆ. 'ಬ್ರಾಹ್ಮಣೋ ವೈ ಸರ್ವಾ ದೇವತಾ' 'ರಾಜಾ ರಾಷ್ಟ್ರಮ್' ಎಂಬ ವ್ಯವಹಾರದಲ್ಲಿ ಕಾಣುವಂತೆ 'ಬ್ರಹ್ಮನಲ್ಲಿ ದೇವತೆಗಳೆಲ್ಲ ಇದ್ದಾರೆ' 'ರಾಷ್ಟ್ರವು ರಾಜನನ್ನು ಆಶ್ರಯಿಸಿದೆ' ಎಂದು ಅರ್ಥಮಾಡಿಕೊಳ್ಳುವಂತೆ, ಪ್ರಕೃತ ಬ್ರಹ್ಮನು ಸಕಲವಿಧ ವಿಶ್ವಕ್ಕೆ ಆಶ್ರಯನೆಂದು ಅರ್ಥ ಮಾಡಬಹುದಾಗಿದೆ.

'ಪುರುಷ ಏವೇದಂ ಸರ್ವಂ ಭೂತಂ ಭವ್ಯಂ ಭವಚ್ಚ ಯತ್ ।
ಇತ್ಯುಚ್ಯತೇ ತದೀಯತ್ವಾತ್ ನ ತು ಸರ್ವಸ್ವರೂಪತಃ ॥'

'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ'

ಇವೇ ಮೊದಲಾದ ಸ್ಮೃತಿವಾಕ್ಯಗಳು, ಎಲ್ಲ ವಿಶ್ವವು ಬ್ರಹ್ಮನ ಅಧೀನವಾಗಿದೆ. ಅವನಿಂದ ವ್ಯಾಪ್ತವೂ ನಿಯಮ್ಯವೂ ಆಗಿದೆ ಎಂದು ಬೋಧಿಸುತ್ತಿವೆ. ಆದ್ದರಿಂದ ಅವನ ನಿಯಾಮಕತೆಯನ್ನು ವಿವರಿಸಲು 'ಎಲ್ಲ ಬ್ರಹ್ಮನೇ' ಎಂದು ಶ್ರುತಿ ಹೇಳುತ್ತಿದೆ. ಇದರ ಮರ್ಮವರಿಯದೇ ಜೀವ-ಜಡಗಳು ಬ್ರಹ್ಮನೆಂದಾಗಲೀ, ಬ್ರಹ್ಮನಲ್ಲಿ ಜೀವ-ಜಡಗಳು ಆರೋಪಿತ ವೆಂದಾಗಲಿ ಅರ್ಥ ವರ್ಣಿಸುವುದು ಯೋಗ್ಯವಲ್ಲ.

## ಇಂದ್ರೋ ಮಾಯಾಭಿಃ (4.5.19)

ಇಂದ್ರನು ಮಾಯೆಯ ಸಂಪರ್ಕದಿಂದ ಅನೇಕ ರೂಪನಾಗಿ ಕಾಣಿಸುವನು. ಶುದ್ಧ ಚೈತನ್ಯದಲ್ಲಿ ಆರೋಪಿತವಾದ ಬಹುರೂಪವಾದ ವಿಶ್ವವು ಅಸತ್ಯವೆಂದು ಮೇಲಿನ ವಾಕ್ಯಕ್ಕೆ ಅದ್ವೈತಿಗಳ ವಿವರಣೆ ಇದೆ. ಇದು ಪ್ರಕರಣಕ್ಕೆ ಅನುಚಿತವಾಗಿದೆ-'ರೂಪಂ ರೂಪಂ ಪ್ರತಿರೂಪೋ ಬಭೂವ' ಎಂಬುದಾಗಿ ಹಿಂದೆ ಜೀವರೆಂಬ ಪ್ರತಿಬಿಂಬರಿಗೆ ಬಿಂಬನಾದ ಭಗವಂತನ ರೂಪವನ್ನೇ 'ರೂಪ'ಶಬ್ದದಿಂದ ಇಲ್ಲಿ ಉಲ್ಲೇಖಿಸಲಾಗಿದೆ. ಮುಂದೆಯೂ 'ಅಯಂ ವೈ ಹರಯೋ ದಶ ಚ ಸಹಸ್ರಾಣಿ ಚ ಬಹೂನಿ ಚಾನಂತಾನಿ' ಎಂಬುದಾಗಿ ಪರಮಾತ್ಮನ ಮತ್ಸ್ಯಾದಿ ಹತ್ತು ರೂಪಗಳ, ವಿಶ್ವಾದಿ ಸಹಸ್ರರೂಪಗಳ, ಪರಾದಿ ಬಹುರೂಪಗಳ, ಅಜಿತಾದಿ ಅನಂತರೂಪಗಳ ವಿಶ್ಲೇಷಣೆ ಇದೆ. ಈ ರೂಪಗಳು ಕಾಲ್ಪನಿಕವಲ್ಲವೆಂದು 'ತದೇತದ್ ಬ್ರಹ್ಮಾ ಪೂರ್ವಮನಪರಮನಂತರಮ್...'' ಇತ್ಯಾದಿಯಾಗಿ ಬ್ರಹ್ಮನಿಂದ ಅಭಿನ್ನವೆಂದೂ ತಿಳಿಸಲಾಗಿದೆ.

ಚೈತನ್ಯವು ನಾನಾ ಬಗೆಯ ವಿಶ್ವದ ಆರೋಪಕ್ಕೆ ಆಶ್ರಯವೆಂಬ ಅರ್ಥ ವಿವರಿಸುವವರಿಗೆ, 'ಇಂದ್ರ'ಶಬ್ದವು ಅಸ್ವರಸವಾಗುವುದು.

'ಮಾಯಾಂ ತು ಪ್ರಕೃತಿಂ ವಿದ್ಯಾತ್' ಎಂಬಲ್ಲಿ ವಿಶ್ವದ ಉಪಾದಾನಕಾರಣವಾದ ಪ್ರಕೃತಿಯನ್ನು ಉಲ್ಲೇಖಿಸಿ 'ಮಾಯಾ'ಶಬ್ದದಿಂದ ಅದನ್ನು ಮಿಥ್ಯೆಯೆಂದು ವಿವರಿಸಲಾಗಿದೆ. ಆದ್ದರಿಂದ ಮಿಥ್ಯಾಭೂತವಾದ ಪ್ರಕೃತಿಯೇ ಉಪಾದಾನವಾಗಿಯುಳ್ಳ ಈ ವಿಶ್ವವು (ಉಪಾದೇಯವು) ಮಿಥ್ಯೆಯಾಗಬೇಕು ಎಂಬ ಅದ್ವೈತಿಗಳ ವಿವರಣೆ ವಿಶ್ವಮಿಥ್ಯಾತ್ವಕ್ಕೆ ಸಾಧಕವಾಗಲಾರದು.

ಇಲ್ಲಿ ಪೂರ್ವಪ್ರಕೃತವಾದ ಮಾಯೆಯನ್ನು ಉಲ್ಲೇಖಿಸಿ ಅದನ್ನೇ ಪ್ರಕೃತಿಯೆಂದು ಕರೆಯಲಾಗಿದೆ. ಪ್ರಕೃತಿಯು ಮಿಥ್ಯೆಯೆಂದು ಈ ವಾಕ್ಯದ ಅರ್ಥವಲ್ಲ. ಮಣಿಮಂತ್ರಾದಿ ಸಿದ್ಧಿಯುಳ್ಳ ವ್ಯಕ್ತಿಯನ್ನು 'ಮಾಯಾವಿ' ಎಂದು ಕರೆಯುವುದು ಲೋಕಪ್ರಸಿದ್ಧವಾಗಿದ್ದು

ಇಲ್ಲಿ ಸತ್ಯವಾದ ವಸ್ತುವಿನಲ್ಲಿ 'ಮಾಯಾ'ಶಬ್ದಪ್ರಯೋಗವು ಕಂಡಿದೆ. ಆದ್ದರಿಂದ ಮಾಯಾಶಬ್ದಕ್ಕೆ ಪ್ರಕೃತ ಮಿಥ್ಯೆಯೆಂಬ ಅರ್ಥ ಹೇಳಬೇಕಿಲ್ಲ. ಈ ಹಿನ್ನೆಲೆಯಲ್ಲಿ ಈ ಶ್ರುತಿಯು ಬ್ರಹ್ಮನು ಬಿಂಬನೆಂದೂ ಜೀವರು ಪ್ರತಿಬಿಂಬರೆಂದೂ ನಿರೂಪಿಸುತ್ತಿದೆ.

**ನ ಪ್ರೇತ್ಯ ಸಂಜ್ಞಾಸ್ತಿ (4.4.12)**

**ಯತ್ರ ಹಿ ದ್ವೈತಮಿವ ಭವತಿ....ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ (4.4.14)**

ಬೃಹದಾರಣ್ಯಕದಲ್ಲಿ ಯಾಜ್ಞವಲ್ಕ್ಯ-ಮೈತ್ರೇಯಿ ಸಂವಾದದ ಈ ಘಟ್ಟ ಅತ್ಯಂತ ಚೇತೋಹಾರಿಯಾಗಿದೆ. ಅಮೃತತ್ವ ದೊರಕಿಸಿಕೊಡದ ಸಂಪತ್ತಿನಿಂದೇನು ಲಾಭ? ನನಗೆ ತತ್ತ್ವಜ್ಞಾನವನ್ನೇ ಕರುಣಿಸಿರೆಂದು ಮೈತ್ರೇಯಿ ಯಾಜ್ಞವಲ್ಕ್ಯರನ್ನು ಪ್ರಾರ್ಥಿಸಿದಾಗ ಆನಂದತುಂದಿಲರಾದ ಯಾಜ್ಞವಲ್ಕ್ಯರು ಅವಳ ಆಧ್ಯಾತ್ಮಿಕ ಜಿಜ್ಞಾಸೆಯನ್ನು ಅಭಿನಂದಿಸಿ ಉಪದೇಶ ನೀಡಿದರು–

ಚತುರ್ಮುಖ-ತ್ರಿನೇತ್ರ-ಸಕಲ ದೇವತೆಗಳು-ಸಕಲ ಲೋಕಗಳು, ಅಷ್ಟೇ ಏಕೆ ಪ್ರಕೃತಿ ತತ್ತ್ವದ ಅಭಿಮಾನಿನಿಯಾದ ಶ್ರೀದೇವಿಯೂ ಕೂಡ ಯಾವ ನಾರಾಯಣನನ್ನು ಆಶ್ರಯಿಸಿರುವಳೋ ಅಂತಹ ನಾರಾಯಣನು ಗುಣಪೂರ್ಣನಾದ ಪರದೇವತೆ.

ಅವನ ಮಹಿಮೆ-ಇಚ್ಛಾಶಕ್ತಿಯ ಪರಿಚಯವಿರುವವನು ಈ ವಿಶ್ವವು ಬೇರೆ ದೇವತೆಗಳ ಸೃಷ್ಟಿಯಾಗಬಹುದೆಂದು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ.

ನಗಾರಿ-ಶಂಖ-ವೀಣೆಗಳಿಂದ ಮೊಳಗುವ ಶಬ್ದದ ಪರಿಚಯವಿರುವ ಪ್ರಾಜ್ಞನಿಗೆ ನಗಾರಿಯ ಶಬ್ದ ಕೇಳಿದಾಗ ಇದು ವೀಣೆಯ ಧ್ವನಿಯೆಂಬ ಭ್ರಮೆ ಹೇಗೆ ಜನಿಸಲಾರದೋ, ಅದರಂತೆಯೇ ಶ್ರೀಹರಿಯ ಇಚ್ಛಾಶಕ್ತಿಯಿಂದ ಜನಿಸಿದ ಈ ವಿಶ್ವವು ಚತುರ್ಮುಖನೇ ಮೊದಲಾದ ಇತರ ದೇವತೆಗಳ ಅಧೀನವೆಂದು ಯಾರೂ ಅರಿಯಲಾರರು. ಸಮಗ್ರ ಆರ್ಷ ವಾಙ್ಮಯ ಅವನ ಶ್ವಾಸೋಚ್ಛ್ವಾಸದಿಂದ ಅಭಿವ್ಯಕ್ತಗೊಂಡಿದೆ. ಶ್ರೀಹರಿಯು ಸಮಗ್ರ ವಿಶ್ವಕ್ಕೆ ಆಶ್ರಯನಾಗಿದ್ದಾನೆ. ಶ್ರೀಹರಿಯು ಕೇವಲ ಅಮುಕ್ತ ಜೀವರಿಗೆ ಆಶ್ರಯನೆಂದು ಭಾವಿಸಬಾರದು. ಅವನು ಹಿಂದಿನ ಕಲ್ಪಗಳಲ್ಲಿ ಮುಕ್ತರಾದ ಚೇತನರಿಗೆ ಆಶ್ರಯನಾಗಿರುವಂತೆ ನೂತನ ಮುಕ್ತರಿಗೂ ಆಶ್ರಯದಾತನು. ಲವಣ ಸಮುದ್ರದಲ್ಲಿ ಹಾಕಿದ ಉಪ್ಪು ಕರಗಿ ಒಳಗೆ ಸೇರುವಂತೆ ಮತ್ತು ಮರಳಿ ತೆಗೆಯಲು ಬಾರದಂತೆ ಮುಕ್ತ ಚೇತನರೂ ಶ್ರೀಹರಿಯನ್ನು ಸೇರಿದ ಬಳಿಕ ಸಂಸಾರಕ್ಕೆ ಮರಳಲಾರರು. ಮುಕ್ತನಾದ ಚೇತನನ ಅರಿವು ಅಮುಕ್ತರಾದ ನಮಗಿರಲಾರದು–'ನ ಪ್ರೇತ್ಯ ಸಂಜ್ಞಾಸ್ತಿ'

ಮುಕ್ತನಿಗೆ ಜ್ಞಾನವೇ ಇರುವುದಿಲ್ಲ ಮತ್ತು ಚೈತನ್ಯವೊಂದನ್ನು ಬಿಟ್ಟು ಬೇರಾವ ವಸ್ತುಗಳೂ ಮುಕ್ತಿಯಲ್ಲಿ ಇರುವುದಿಲ್ಲವೆಂದು ಮೇಲಿನ ಮಾತಿನ ಅಭಿಪ್ರಾಯ

ಕಾಣುವುದು. ಅದಕ್ಕಾಗಿ ಮೈತ್ರೇಯಿ ಪ್ರಶ್ನಿಸುವಳು. ಪೂಜ್ಯರೇ! ತಾವು ಮೋಹಕ ಮಾತನ್ನಾಡದಿರಿ. ಮುಕ್ತ ಚೇತನನಿಗೆ ಜ್ಞಾನವಿಲ್ಲವಾದರೆ ಜಡತುಲ್ಯವಾದ ಅವಸ್ಥೆಯನ್ನು ನೀಡುವ ಮುಕ್ತಿ ಹೇಗೆ ತಾನೆ ಪುರುಷಾರ್ಥವಾದೀತು? ನಿರ್ಗುಣ-ನಿರಾಕಾರ ಚೈತನ್ಯದ ಅವಸ್ಥಿತಿ(ಇರುವಿಕೆ) ಯಾರಿಂದ ಬಯಸಲ್ಪಡುವುದು? ಆತ್ಮನು ತನ್ನ ಮತ್ತು ಇತರ ವಸ್ತುಗಳ ಜ್ಞಾನವನ್ನು ಮುಕ್ತಿಯಲ್ಲಿ ಕಳೆದುಕೊಳ್ಳುವುದಾದರೆ ಅಂತಹ ಮುಕ್ತಿ ಅನಾದರಣೀಯವಾಗದೆ?

ಯಾಜ್ಞವಲ್ಕ್ಯರು ಮರಳಿ ಉತ್ತರಿಸಿದರು—ನನ್ನ ಮಾತಿನ ಆಂತರ್ಯವಿಷ್ಟು. 'ಅವಿನಾಶೀ ವಾ ಅರೇ ಅಯಮಾತ್ಮಾ ಅನುಚ್ಛಿತ್ತಿಧರ್ಮಾ' ಆತ್ಮ ಹಾಗೂ ಅವನ ಧರ್ಮಗಳು ಎಂದೂ ವಿನಾಶ ಹೊಂದುವುದಿಲ್ಲ. ಜ್ಞಾನವು ಆತ್ಮನ ಸಹಜ ಗುಣ. ಇದನ್ನು ಮುಕ್ತಿಯಲ್ಲಿ ಕಳೆದುಕೊಳ್ಳುವುದು ಸಾಧ್ಯವಿಲ್ಲ. ಮುಕ್ತಿಯಲ್ಲೂ ಆತ್ಮನಿಗೆ ತನ್ನ ಜ್ಞಾನ-ಪರಮಾತ್ಮನ ಜ್ಞಾನ-ಇತರ ವಸ್ತುಗಳ ಜ್ಞಾನ ಇದ್ದೇ ಇರುತ್ತದೆ. ಆದರೆ ಅಮುಕ್ತರು, ಮುಕ್ತರ ಬಗೆಗಿನ ಸಂಪರ್ಕಜ್ಞಾನವನ್ನು ಕಳೆದುಕೊಳ್ಳುವರೆಂದೇ ನನ್ನ ಅಭಿಪ್ರಾಯವಾಗಿದೆ. ಮುಕ್ತನಿಗೆ ಪ್ರಾಕೃತ ಇಂದ್ರಿಯ ಮತ್ತು ಪ್ರಾಕೃತ ಜ್ಞಾನ ನಾಶವಾಗಬಹುದಾದರೂ ಅವನು ಸ್ವತಃ ಜ್ಞಾನರೂಪನಾದುದರಿಂದ ಜ್ಞಾನನಾಶವಾಗುವುದು ಸಾಧ್ಯವೇ ಇಲ್ಲ.

ಯಾಜ್ಞವಲ್ಕ್ಯರು ತಮ್ಮ ಉಪದೇಶವನ್ನು ಮುಂದುವರೆಸುತ್ತ ನುಡಿದರು— ಮುಕ್ತಿಯಲ್ಲಿ ಚೈತನ್ಯಕ್ಕಿಂತ ಭಿನ್ನವಾದ ಎಲ್ಲ ವಸ್ತುಗಳು ಅಸ್ತಿತ್ವ ಕಳೆದುಕೊಳ್ಳುವುದಾದರೆ ದರ್ಶನ-ಆಘ್ರಾಣನ ಮೊದಲಾದವು ಹೇಗೆ ಸಾಧ್ಯವಾಗುವುದು? ಮುಕ್ತನು ಪರಮಾತ್ಮನನ್ನು ಉಪಾಸಿಸುವುದು ಹೇಗೆ? ನಿರ್ವಿಶೇಷನಾದ ಆತ್ಮನು ಮಾತ್ರವೇ ಮುಕ್ತಿಯಲ್ಲಿ ಇರುವಲ್ಲಿ ತನ್ನಲ್ಲಿ ಜ್ಞಾನ ಬರುವುದಾದರೂ ಹೇಗೆ? ಒಂದೇ ಕ್ರಿಯೆಯಲ್ಲಿ ಆತ್ಮನು ಕರ್ತೃ ಹಾಗೂ ಕರ್ಮ ಆಗಲಾರನಷ್ಟೆ? ಆದ್ದರಿಂದ ಯಾವುದೇ ವಿಧವಾದ ಅನುಭವ ವಿಲ್ಲದ ಶಿಲೆಯಂತೆ ಇರುವ ಚೈತನ್ಯದ ಅಸ್ತಿತ್ವವನ್ನು ಪುರುಷಾರ್ಥವೆನ್ನುವುದು ಅಪ್ರಾಮಾಣಿಕ-ಅನುಭವ ವಿರುದ್ಧ. ಮುಕ್ತಿಯಲ್ಲಿ ಜ್ಞಾನವಿಲ್ಲದ ಸ್ಥಿತಿ ದುಃಖದಾಯಕ ವಲ್ಲವೆ? ಹೀಗೆ ಆಕ್ಷೇಪದ ಶೈಲಿಯಲ್ಲಿ ಪ್ರತ್ಯುತ್ತರ ನೀಡಿದ ಯಾಜ್ಞವಲ್ಕ್ಯರು ಕೇವಲ ಚೈತನ್ಯದ ಅಸ್ತಿತ್ವವನ್ನು ನಿರಾಕರಿಸಿ, ಭೋಗ್ಯ ವಸ್ತುಗಳ ಅಸ್ತಿತ್ವ, ಆತ್ಮಸ್ವರೂಪವಾದ ಇಂದ್ರಿಯಗಳ ಅಸ್ತಿತ್ವ, ಅಂತರ್ಯಾಮಿಯಾದ ಪರಮಾತ್ಮನ ಅಸ್ತಿತ್ವ ಹಾಗೂ ಜ್ಞಾನಗಳನ್ನು ಅಂಗೀಕರಿಸಿದ್ದಾರೆ.

ಹೀಗೆ ಉಪನಿಷತ್ತಿನ ಕೆಲವು ಪ್ರಮುಖ ವಾಕ್ಯಗಳ ಆಂತರ್ಯವನ್ನು ಅರಿಯ ಬಹುದಾಗಿದೆ.

# ಶ್ರೀರಾಘವೇಂದ್ರತೀರ್ಥರು

ಕಲಿಯುಗದ ಕಾಮಧೇನು ಕಲ್ಪವೃಕ್ಷವೆಂದು ದೇವತೆಗಳಿಂದ ಗೇಗೀಯಮಾನ ವೈಭವವುಳ್ಳ ಶ್ರೀರಾಯರು ಶ್ರೀಮದಾಚಾರ್ಯರ ವಿಶಿಷ್ಟಸನ್ನಿಧಾನಪಾತ್ರರು. ಜಗದ್ಗುರು ಶ್ರೀಮದಾಚಾರ್ಯ ರಂತೆ ವೇದ-ಉಪನಿಷತ್-ಬ್ರಹ್ಮಸೂತ್ರ-ಗೀತೆ-ಮಹಾಭಾರತ-ಭಾಗವತ-ತಂತ್ರಶಾಸ್ತ್ರ ಮೊದಲಾದ ಜ್ಞಾನದ ಎಲ್ಲ ಶಾಖೆಗಳಿಗೂ ತಮ್ಮ ಅಪೂರ್ವ ವ್ಯಾಖ್ಯೆ ನೀಡಿ ದ್ವೈತ ವಾಙ್ಮಯವನ್ನು ಆಗಸದೆತ್ತರಕ್ಕೆ ಬೆಳೆಸಿದವರು. ಕೆಲವರು ಸಂಗ್ರಹವಾಗಿ ಬರೆಯಬಲ್ಲರು. ಆ ಸಂಗ್ರಹದಲ್ಲಿ ಆಳ-ವೈಶಾಲ್ಯಗಳಿರುವುದಿಲ್ಲ. ಕೆಲವರು ವಿಸ್ತಾರ ಮಾತ್ರ ಮಾಡಬಲ್ಲರು. ಸಂಗ್ರಹ ಮಾಡುವ ಚಾತುರ್ಯ ಇರದು. ರಾಯರ ಕೃತಿಗಳಲ್ಲಿ ಸಂಗ್ರಹ-ಅರ್ಥವೈಶಾಲ್ಯ ಎರಡೂ ಅಡಗಿದೆ. ಶ್ರೀರಾಯರ ಮಹಿಮೆ ಕೇವಲ ವಿದ್ವತ್‌ಪರಿಜ್ಞೇಯವಾಗಿದೆ. ಶ್ರೀಕೃಷ್ಣನು ಪುಟ್ಟ ಬಾಯಲ್ಲಿ ಬ್ರಹ್ಮಾಂಡ ತೋರಿದಂತೆ ಶ್ರೀರಾಯರು ತಮ್ಮ ಪುಟ್ಟ ವಾಕ್ಯಗಳಲ್ಲಿ ಶ್ರೀಮದಾಚಾರ್ಯರ-ಟೀಕಾಚಾರ್ಯರ -ವ್ಯಾಸರಾಜರ ಭಾವವನ್ನು ಹೃದಯಂಗಮವಾಗಿ ಸಂಗ್ರಹಿಸುವರು. ಕಠಿಣವೂ ಗಭೀರವೂ ಸಂಕ್ಷಿಪ್ತವೂ ಆದ ಪ್ರಾಚೀನಾಚಾರ್ಯರ ಪಥ್ಯ ಭಾಗವನ್ನು ವಿಸ್ತೃತವಾಗಿ ಎಳೆಎಳೆಯಾಗಿ ವಿವರಿಸಿ ಅದರ ಗಾಂಭೀರ್ಯವನ್ನು ಹೊರಗೆಡಹಿ ಅನುಗ್ರಹಿಸುವುದು ರಾಯರ ಮಹದುಪಕಾರ. ಅವರ ಖಂಡಾರ್ಥ ವೈಶಿಷ್ಟ್ಯವನ್ನು ಹೀಗೆ ಸಂಕ್ಷೇಪವಾಗಿ ವಿವರಿಸಬಹುದು–

1. ಉಪನಿಷತ್ತಿನ ಪದಗಳಲ್ಲಿ ಔಚಿತ್ಯವನ್ನು ವಿವರಿಸುವುದು ಮತ್ತು ಸಂವಾದಿಯಾಗಿ ಶ್ರುತಿಗಳ ಉಲ್ಲೇಖ ಹಾಗೂ ವ್ಯಾಖ್ಯಾನ.
2. ಶ್ರುತಿವಾಕ್ಯಗಳಿಂದ(ವಿಷಯವಾಕ್ಯದಿಂದ) ರೂಪುಗೊಂಡ ಸೂತ್ರಗಳ ಉಲ್ಲೇಖ-ವಿಮರ್ಶೆ.
3. ಉಪನಿಷತ್ತಿನ ಪದಗಳಲ್ಲಿ ದಲಕೃತ್ಯಚಿಂತನೆ(ಅನ್ವಯದಿಂದ ಅರ್ಥಗೌರವ).
4. ಭಾಷ್ಯಾದಿಗಳ ವಿಸ್ತೃತ ಪ್ರಮೇಯಸಂಗ್ರಹ.
5. ವಿರೋಧಪರಿಹಾರ.
6. ದೇವತಾಪರವಾದ ಅರ್ಥದ ವಿವರಣೆ–ಮಿತಿ.
7. ಪದಗಳಿಗೆ ವಿಶಿಷ್ಟ ವಿವರಣೆ.
8. ಉಪನಿಷತ್ತಿನ ವಾಕ್ಯಕ್ಕೆ ಗ್ರಂಥಾಂತರಗಳಲ್ಲಿ ಮಾಡಿದ ವಿಭಿನ್ನ ವ್ಯಾಖ್ಯಾನದ ಉಲ್ಲೇಖ- ವಿವರಣೆ.
9. ಪ್ರಾಚೀನಟೀಕಾ-ಚಂದ್ರಿಕಾದಿ ಉದ್‌ಗ್ರಂಥಗಳಲ್ಲಿನ ವಾಕ್ಯಾರ್ಥಜ್ಞಾಪನ
10. ಪ್ರಮೇಯಸ್ಪಷ್ಟೀಕರಣ.

11. ತಪ್ಪು ಕಲ್ಪನೆಯ ನಿವಾರಣೆ.

12. ಅಪವ್ಯಾಖ್ಯಾನನಿರಾಕರಣೆ.

**ಖಂಡಾರ್ಥದ ವೈಶಿಷ್ಟ್ಯ**

ಭಾಷ್ಯಕಾರರು ಸ್ಫುಟವಾಗಿ ವ್ಯಾಖ್ಯಾನಿಸಿದ ಉಪನಿಷತ್ತಿನ ಭಾಗಗಳಿಗೆ ಕೆಲವು ಪದಗಳಿಗೆ ವಿಶಿಷ್ಟ ವಿವರಣೆ ನೀಡುವುದು ಖಂಡಾರ್ಥದ ವೈಶಿಷ್ಟ್ಯವಾಗಿದೆ. ಮೂರನೆಯ ಅಧ್ಯಾಯದ ಎರಡನೆಯ ಬ್ರಾಹ್ಮಣದಲ್ಲಿ ಒಂದು ವಾಕ್ಯವಿದೆ–'ಅಶನಾಯಾ ಹಿ ಮೃತ್ಯುಃ' ಎಂಬುದಾಗಿ. ಇಲ್ಲಿ 'ಅಶನಾಯಾ'ಪದಕ್ಕೆ ಸ್ವೇಚ್ಛೆಯಿಂದ ಶ್ರೀಹರಿ ವಿಶ್ವವನ್ನು ನಡೆಸುವವನು ಎಂದು ಅರ್ಥವಾಗಿದೆ. ಇಲ್ಲಿ 'ಹಿ' ಪದದ ಔಚಿತ್ಯವನ್ನು ರಾಯರು ತಿಳಿಸುತ್ತಾರೆ. ಶ್ರೀಹರಿಯೇ ಸ್ವತಂತ್ರನಾಗಿ ವಿಶ್ವವನ್ನು ನಿಯಂತ್ರಿಸುವನೆಂಬ ಸಂಗತಿ ಶ್ರುತಿಪ್ರಸಿದ್ಧವಾಗಿದೆ.

'ಏಕಃ ಪುರಸ್ತಾದ್ ಯ ಇದಂ ಬಭೂವ
ಯತೋ ಬಭೂವ ಭುವನಸ್ಯ ಗೋಪಾಃ ।
ಯಮಪ್ಯೇತಿ ಭುವನಂ ಸಾಂಪರಾಯೇ
ಸ ನೋ ಹರಿರ್ಘೃತಮಿಹಾಯುಷೇಽತ್ತು ದೇವಃ'

ಇದರ ಅರ್ಥ ಹೀಗಿದೆ–''ಶ್ರೀಹರಿಯೊಬ್ಬನೇ ಈ ವಿಶ್ವಸೃಷ್ಟಿಯ ಮೊದಲು ಇದ್ದನು. ಅವನಿಂದಲೇ ಈ ಜೀವಜಡಾತ್ಮಕ ವಿಶ್ವವು ಉತ್ಪತ್ತಿಯನ್ನು ಪಡೆಯಿತು. ಅವನೇ ಎಲ್ಲ ವಿಶ್ವದ ರಕ್ಷಕ. ಪ್ರಲಯಕಾಲದಲ್ಲಿ ಮತ್ತೆ ಈ ವಿಶ್ವವು ಅವನ ಹೊಟ್ಟೆಯೊಳಗೆ ಅಡಗುವುದು. ಇಂತಹ ಶ್ರೀಹರಿಯು ನಮ್ಮ ಆಯುರ್ವೃದ್ಧಿಗಾಗಿ ತುಪ್ಪದ ಆಹುತಿಯನ್ನು ಸ್ವೀಕರಿಸಲಿ''

ಪ್ರಲಯಕಾಲದಲ್ಲಿ ನಾರಾಯಣನ ಅಸ್ತಿತ್ವ, ಅವನಿಂದಲೇ ವಿಶ್ವೋತ್ಪತ್ತಿ-ರಕ್ಷಣೆ-ಸಂಹಾರಗಳಾಗುವವೆಂಬ ಸಂಗತಿ ಈ ಶ್ರುತಿಯಲ್ಲಿ ಸ್ಫುಟವಾಗಿ ನಿರೂಪಿತವಾಗಿದೆ. ಈ ಶ್ರುತಿಯ ಉದಾಹರಣೆಯ ಮೂಲಕ ಶ್ರೀರಾಯರು 'ಹಿ'ಶಬ್ದದ ಔಚಿತ್ಯ, ಪ್ರಕೃತ-ಪ್ರಮೇಯಸಮರ್ಥನೆ ಎರಡನ್ನೂ ಮಾಡಿದ್ದಾರೆ.

ಇದರಂತೆ 'ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ' ಎಂಬ ಉಪನಿಷತ್ತಿನ ವ್ಯಾಖ್ಯಾನ ಮಾಡುವಾಗ ಸಂವಾದಿಯಾದ ಕಠೋಪನಿಷತ್ತಿನ 'ಅದಿತಿರ್ದೇವತಾಮಯೀ' ಎಂಬ ವಾಕ್ಯೋಲ್ಲೇಖವು ಗಮನಾರ್ಹವಾಗಿದೆ. ಇಂತಹ ಅನೇಕ ಪ್ರಸಂಗಗಳನ್ನು ಖಂಡಾರ್ಥದುದ್ದಕ್ಕೂ ಕಾಣಬಹುದಾಗಿದೆ.

**ಸೂತ್ರಗಳ ಉಲ್ಲೇಖ**

ಶ್ರುತಿಗಳು ಶ್ರೀಹರಿಯ ಅನಂತ ಮಹಿಮೆಯನ್ನು ಸಾಧಕರ ಅನುಸಂಧಾನಕ್ಕಾಗಿ

ಸಂಕ್ಷೇಪ-ವಿಸ್ತಾರಗಳಿಂದ ನಿರೂಪಿಸುತ್ತವೆ. ಒಂದೇ ಅಭಿಪ್ರಾಯದ ಅನೇಕ ಶಾಖೆಗಳಲ್ಲಿರುವ ವೇದವಾಕ್ಯಗಳನ್ನು ಗಮನಿಸಿ ಶ್ರೀಬಾದರಾಯಣರು 'ಸೂತ್ರ'ಗಳನ್ನು ರಚಿಸಿದ್ದಾರೆ. ಶ್ರುತಿಯ ಅರ್ಥವನ್ನು ನಿರ್ಣಯಿಸುವ ಯುಕ್ತಿಗಳ ಸಮೂಹವೇ ಸೂತ್ರಸಾಹಿತ್ಯ ಎನಿಸಿದೆ. ನಮ್ಮಂತಹ ಪಾಮರರಿಗೆ ಶ್ರುತಿಗಳ ಅಭ್ಯಾಸ ಮಾಡುವಾಗ ಅದರಿಂದ ನಿಷ್ಪನ್ನವಾದ ಸೂತ್ರಗಳ ಸಂಸ್ಮರಣೆ-ಅನುಸಂಧಾನ ದುಃಸಾಧ್ಯವಾಗಿದೆ. ಇಂತಹ ಸಮಯದಲ್ಲಿ ಶ್ರೀರಾಯರು ತಮ್ಮ ಖಂಡಾರ್ಥದಲ್ಲಿ ಉಪನಿಷತ್ತಿನ ನಿರ್ದಿಷ್ಟ ಭಾಗವನ್ನು ವಿವರಿಸಿ ಇದರಿಂದ ನಿಷ್ಪನ್ನಗೊಂಡ ಸೂತ್ರವನ್ನು ಉಲ್ಲೇಖಿಸುವರು. ಈ ಬಗ್ಗೆ ಒಂದು ಉದಾಹರಣೆಯನ್ನು ಗಮನಿಸಬಹುದು. 'ಯದ್ಯದೇವ ಅಸೃಜತ ತತ್ತದತ್ತುಮಧ್ರಿಯತ । ಸರ್ವಂ ವಾ ಅತ್ತೀತಿ ತದದಿತೇ- ರದಿತಿತ್ವಮ್'(3-2-6) ಇದರ ಅರ್ಥ ಹೀಗಿದೆ. ಚತುರ್ಮುಖನು ಸೃಷ್ಟಿಸಿದ ಎಲ್ಲವನ್ನೂ ಶ್ರೀಹರಿಯು ತಿನ್ನಬಯಸಿದನು. ಎಲ್ಲವನ್ನು ತಿನ್ನುವುದರಿಂದಲೇ ಅವನು 'ಅದಿತಿ' ಎನಿಸಿದ್ದಾನೆ.

ಈ ಪ್ರಸಂಗದಲ್ಲಿ 'ಅದಿತಿ' ಎಂದರೆ ತನ್ನ ಯೋಗ್ಯತೆಗೆ ತಕ್ಕಂತೆ ಎಲ್ಲ ತಿನ್ನುವ ದೇವಮಾತೆಯಾದ 'ಅದಿತಿ'ಯನ್ನು ಏಕೆ ತೆಗೆದುಕೊಳ್ಳಬಾರದು? ಎಂಬ ಪ್ರಶ್ನೆ ಸಹಜ. ರಾಯರು ಇದು ಬ್ರಹ್ಮಪ್ರಕರಣವಾದುದರಿಂದಲೂ ದೇವಮಾತೆಯಾದ ಅದಿತಿಗೆ ತನ್ನ ಯೋಗ್ಯತೆಗೆ ಅನುಗುಣವಾಗಿ ಅದನವಿದ್ದರೂ(ತಿನ್ನುವಿಕೆ ಇದ್ದರೂ) ಚತುರ್ಮುಖನಿಂದ ಸೃಷ್ಟವಾದ ಸಕಲ ವಿಶ್ವದ ಅತ್ತೃತ್ವವು ಅವಳಿಗೆ ಇರುವುದಿಲ್ಲ. ಉಪನಿಷತ್ತಿನಲ್ಲಿ ಬರುವ 'ಸರ್ವ'ಶಬ್ದಕ್ಕೆ ಸಂಕೋಚ ಮಾಡಲು ಯಾವ ಕಾರಣವೂ ಇಲ್ಲದ ಹಿನ್ನೆಲೆಯಲ್ಲಿ ಇಲ್ಲಿ ಸೃಷ್ಟವಾದ ಎಲ್ಲವನ್ನೂ ತಿನ್ನುವ ಅದಿತಿಯೆಂದರೆ ನಾರಾಯಣನೇ ಆಗಿರುವನೆಂದು ವಿವರಿಸಿದ್ದಾರೆ. ತಮ್ಮ ಅಭಿಪ್ರಾಯಕ್ಕೆ ಪೂರಕವಾಗಿ ಈ ಉಪನಿಷತ್ತಿನಿಂದ ರೂಪುಗೊಂಡ ಸೂತ್ರಗಳನ್ನು ಉಲ್ಲೇಖಿಸಿದ್ದಾರೆ–'ಅತ್ತಾ ಚರಾಚರಗ್ರಹಣಾತ್'(ಬ್ರ.ಸೂ. 1.2.9) 'ಪ್ರಕರಣಾಚ್ಚ'(1.2.10) ಪ್ರಾಯಃ ಪ್ರತಿಯೊಂದು ಖಂಡ ವ್ಯಾಖ್ಯಾನಗಳಲ್ಲೂ ಇಂತಹ ಸೂತ್ರೋದಾಹರಣೆ ಮಾಡಿ ಪ್ರಕೃತ ಪ್ರಮೇಯವನ್ನು ಸ್ಫುಟಪಡಿಸುವುದನ್ನು ಖಂಡಾರ್ಥದಲ್ಲಿ ಕಾಣಬಹುದಾಗಿದೆ.

## ಅನ್ವಯದಿಂದ ಅರ್ಥಗೌರವ–ಏವಕಾರದ ವಿಶ್ಲೇಷಣೆ

'ಆತ್ಮೇತ್ಯೇವೋಪಾಸೀತ । ಅತ್ರ ಹ್ಯೇತೇ ಸರ್ವ ಏಕೀಭವಂತಿ' ಎಂಬುದು ಮೂರನೆಯ ಅಧ್ಯಾಯದ ಐದನೆಯ ಖಂಡದ ಒಂದು ಮಂತ್ರ. ಇದರರ್ಥ ಹೀಗಿದೆ–

ಶ್ರೀಹರಿಯನ್ನು 'ಆತ್ಮಾ' ಎಂದು ಉಪಾಸಿಸಬೇಕು. ಆತ್ಮಶಬ್ದವು ಕೇವಲ ಸ್ವಾಮಿತ್ವವೆಂಬ ಗುಣವನ್ನು ಮಾತ್ರವೇ ತಿಳಿಸದೆ, ಜ್ಞಾನ-ಆನಂದ-ಔದಾರ್ಯ ಮೊದಲಾದ ಎಲ್ಲ ಗುಣಗಳಿಗೂ ಶ್ವಾಸನಿಯಂತ್ರಣರೂಪವಾದ 'ಪ್ರಾಣನ' ಮೊದಲಾದ ಕ್ರಿಯೆಗಳಿಗೂ ಸಂಗ್ರಾಹಕವಾಗಿದೆ.

ಆದರೆ ಮೇಲಿನ ವಾಕ್ಯಕ್ಕೆ ಹೀಗೂ ಅರ್ಥ ಕಾಣಿಸುತ್ತದೆ–'' 'ಆತ್ಮೇತ್ಯೇವ' ಎಂಬಲ್ಲಿರುವ ಏವಕಾರಕ್ಕೆ ಕೇವಲ ಆತ್ಮನೆಂದೇ(ಸ್ವಾಮಿಯೆಂದೇ) ಶ್ರೀಹರಿ ಉಪಾಸ್ಯನು. ಜ್ಞಾನಾನಂದಾದಿ ಗುಣಗಳನ್ನು ಅವನಲ್ಲಿ ಚಿಂತಿಸಕೂಡದು'' ಏವಕಾರಕ್ಕೆ ಅನ್ಯಯೋಗವ್ಯವಚ್ಛೇದವೆಂಬ ಅರ್ಥವನ್ನು ಇಟ್ಟುಕೊಂಡಾಗ (ಆತ್ಮಾ ಇತ್ಯೇವ ಉಪಾಸ್ಯಃ) ಈ ಅರ್ಥವು ಕಾಣುತ್ತದೆ. ಆದ್ದರಿಂದ ಉಪನಿಷತ್ತಿನ ಅಂತರಂಗವನ್ನು ರಾಯರು ವಿವರಿಸುತ್ತಾರೆ–'ಅತ್ರೈವಕಾರ ಆತ್ಮೇತ್ಯುಪಾಸೀತೈವೈತಿ ಆತ್ಮತ್ವಾಯೋಗ-ವ್ಯವಚ್ಛೇದಪರೋ ಧ್ಯೇಯಃ'. ಅಂದರೆ ಪ್ರಕೃತ ಏವಕಾರಕ್ಕೆ ಅಯೋಗವ್ಯವಚ್ಛೇದ ರೂಪವಾದ ಅರ್ಥವು ವಿವಕ್ಷಿತವಾಗಿದ್ದು ಆತ್ಮನೆಂದು ಉಪಾಸನೆ ಮಾಡಲೇಬೇಕು (ಆತ್ಮೇತಿ ಉಪಾಸೀತ ಏವ) ಎಂಬ ಅಭಿಪ್ರಾಯವಿದೆ. ಇದು ಜ್ಞಾನಾನಂದಾದಿಗುಣಗಳ ಉಪಾಸನೆಯ ನಿಷೇಧವನ್ನು ಮಾಡುತ್ತಿಲ್ಲ. ಆದ್ದರಿಂದಲೇ ಸರ್ವೋಪಸಂಹಾರಾಧಿ-ಕರಣ ಸೂತ್ರಭಾಷ್ಯದಲ್ಲಿ ಶ್ರೀಮದಾಚಾರ್ಯರು ಹೀಗೆ ನುಡಿದಿದ್ದಾರೆ– 'ಆತ್ಮೇತ್ಯೇ-ವಾವಧಾರಣಮನಾತ್ಮತ್ವನಿವೃತ್ತ್ಯರ್ಥಮ್'. ಇದರಿಂದ, 'ಆತ್ಮತ್ವವಿರೋಧಿಯಾದ ಗುಣಗಳನ್ನು ಉಪಾಸಿಸದೇ ಆತ್ಮತ್ವವನ್ನು ಅವಶ್ಯವಾಗಿ ಉಪಾಸಿಸಲೇ ಬೇಕು' ಎಂದು ಅಭಿಪ್ರಾಯ ವಾಗಿದೆ.

ಇದಕ್ಕೆ ಪ್ರೌಢಿಮೆಯಿಂದ ಮತ್ತೊಂದು ಅರ್ಥವನ್ನು ರಾಯರು ವಿವರಿಸಿದ್ದಾರೆ–ಅಥವಾ ಅನ್ಯಯೋಗವ್ಯವಚ್ಛೇದಾರ್ಥಕತ್ವವನ್ನು ಇಟ್ಟುಕೊಂಡರೂ ಇದರ ಸಾಮಂಜಸ್ಯವನ್ನು ನಿರೂಪಿಸಬಹುದು. ಆಗ ಬ್ರಹ್ಮಾದಿ ಉತ್ತಮ ದೇವತೆಗಳು ಈ ವಾಕ್ಯದಲ್ಲಿ ಹೇಳಿದ ಉಪಾಸನೆಗೆ ಅರ್ಹರು. ಅಂದರೆ ಆತ್ಮಶಬ್ದದಿಂದ ಅದು ತಿಳಿಸುವ ಎಲ್ಲ ಗುಣಗಳನ್ನು ಉಪಾಸನೆ ಮಾಡಬೇಕು. ಆತ್ಮಶಬ್ದವು, ಚತುರ್ಮುಖನಿಗೆ ತನ್ನಲ್ಲಿ ಅಡಗಿದ ಅನಂತ ಗುಣಗಳನ್ನು ಪರಿಚಯಿಸದಿರುವಲ್ಲಿ ಬೇರಾರಿಗೆ ತಿಳಿಸೀತು? ಆದ್ದರಿಂದ ಅನಂತಗುಣಗಳನ್ನು ತನ್ನಲ್ಲಿ ಹುದುಗಿಸಿಕೊಂಡ ಆತ್ಮಶಬ್ದವು 'ಆತ್ಮೇತ್ಯೇವ ಉಪಾಸೀತ' ಎಂಬ ವಾಕ್ಯದಿಂದ, ಸಕಲಗುಣಪೂರ್ಣತ್ವದ ಉಪಾಸನೆಯನ್ನೇ ಬ್ರಹ್ಮದೇವರಿಗೆ ವಿಧಿಸುತ್ತಿದೆ. ಇಲ್ಲವಾದರೆ 'ಗುಣೈಃ ಸರ್ವೈರುಪಾಸ್ಯೋಽಸೌ ಬ್ರಹ್ಮಣಾ' ಇತ್ಯಾದಿ ವಿಧಿಯು ನಿರ್ವಿಷಯಕವಾದೀತು. ಆದ್ದರಿಂದ ಅನಂತಗುಣನೆಂದೇ(ಆತ್ಮೇತ್ಯೇವ) ಬ್ರಹ್ಮದೇವರು ಉಪಾಸಿಸಬೇಕು. ಇದನ್ನು 'ಅನ್ವಯಾದ್ ಇತಿ ಚೇತ್ ಸ್ಯಾದವ-ಧಾರಣಾತ್' (ಬ್ರ.ಸೂ. 3.3.18) ಎಂಬ ಸೂತ್ರದಲ್ಲಿ ಗಮನಿಸಬಹುದೆಂದು ತಮ್ಮ ವಿವರಣೆಯನ್ನು 'ಸೂತ್ರಾರೂಢ' ಮಾಡಿಕೊಡುವರು.

ಇನ್ನು ಸತ್(ನಿರ್ದೋಷ) ಚಿತ್(ಜ್ಞಾನಪೂರ್ಣ) ಆನಂದ(ಸುಖರೂಪ) ಆತ್ಮಾ (ಸ್ವಾಮೀ) ಎಂಬ ನಾಲ್ಕು ಗುಣಗಳನ್ನು ಉಪಾಸನೆ ಮಾಡುವ ಅಧಿಕಾರಿಗಳಿಗೆ 'ಆತ್ಮೇತ್ಯೇವೋಪಾಸೀತ' ಎಂಬ ವಚನವು ನಾಲ್ಕು ಗುಣಗಳ ಉಪಾಸನೆಯನ್ನು ವಿಧಿ

ಸುತ್ತಿದೆ. ಇತರ ಗುಣಗಳ ಉಪಾಸನೆಯನ್ನು ನಿರಾಕರಿಸುತ್ತದೆ ಕೂಡ. ಈ ಅಂಶವನ್ನು 'ಆತ್ಮಗೃಹೀತಿರಿತರವದುತ್ತರಾತ್'(ಬ್ರ.ಸೂ. 3.3.17) ಎಂಬ ಸೂತ್ರದಲ್ಲಿ ಗುರುತಿಸಬಹುದು.

ಇದಲ್ಲದೇ ಆತ್ಮತ್ವರೂಪ ಒಂದೇ ಗುಣವನ್ನು ಉಪಾಸನೆ ಮಾಡಲು ಯೋಗ್ಯನಾಗಿರುವ ಅಧಿಕಾರಿಗೆ ಕೇವಲ ಒಂದೇ ಗುಣದ ಉಪಾಸನೆಯನ್ನು ಈ ವಾಕ್ಯವು ವಿಧಿಸುತ್ತದೆ. ಅವನಿಗೆ ಸ್ಫುರಣವಾಗುವುದೂ ಅಷ್ಟುಮಾತ್ರವೇ. ಆದ್ದರಿಂದ ಇಲ್ಲಿ 'ಏವ'ಕಾರಕ್ಕೆ 'ಅನ್ಯಯೋಗವ್ಯವಚ್ಛೇದ' ಎಂಬ ಅರ್ಥವನ್ನು ಇಟ್ಟುಕೊಳ್ಳುವುದೂ ಸೂಕ್ತವಾಗಿದೆ. ಇದನ್ನು 'ಆತ್ಮಶಬ್ದಾಚ್ಚ'(ಬ್ರ.ಸೂ. 3.3.16) ಎಂಬಲ್ಲಿ ಕಾಣಬಹುದಾಗಿದೆ.

'ಯದ್ವಾ ಯಥಾಶ್ರುತ್ಯೈವಕಾರೋಽನ್ಯಯೋಗವ್ಯವಚ್ಛೇದಪರಃ ಸನ್ ಆತ್ಮಶಬ್ದಾರ್ಥೇ ಸರ್ವಗುಣಾಂತರ್ಭಾವೇ ಯುಕ್ತಿಸೂಚಕಃ । ಅನ್ಯಯೋಗವ್ಯವ-ಚ್ಛೇದಾವಧಾರಣಯುಕ್ತಾತ್ಮಶಬ್ದೋಪಾಸನಾವಿಧಿಃ ಸರ್ವಗುಣೋಪಸಂಹರ್ತೃ-ಬ್ರಹ್ಮಾದೀನಪ್ಯಧಿಕರೋತೀತಿ ತೈರಪ್ಯಾತ್ಮಪದೋಕ್ತಮೇವೋಪಾಸ್ಯಮ್ । ತಥಾಚ ಯದ್ಯಸೌ ನ ತಾನ್ ಪ್ರತಿ ಸರ್ವಗುಣಾನಭಿಧತ್ತೇ ತರ್ಹಿ 'ಗುಣೈಃ ಸರ್ವೈರುಪಾಸ್ಯೋಽಸೌ ಬ್ರಹ್ಮಣಾ' ಇತ್ಯಾದಿ ಸರ್ವಗುಣೋಪಸಂಹಾರವಚನವಿರೋಧಃ ಸ್ಯಾತ್ । ಅತೋಽಸೌ ತೇಷಾಂ ಸರ್ವಗುಣಾಭಿಧಾಯಕ ಇತಿ । ತದುಕ್ತಂ ಸೂತ್ರೇ–'ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್' ಇತಿ । ತಥಾ ಸಚ್ಚಿದಾನಂದಾದಿಚತುರ್ಗುಣೋಪಾಸನಾ-ಧಿಕಾರಿಣಃ ಪ್ರತಿ ತಾವತ ಏವ ಗುಣಾನ್ ವಕ್ತಿ ನೇತರಾನ್ । ತದಾಹ 'ಆತ್ಮ ಗೃಹೀತಿರಿತರವದುತ್ತರಾತ್' ಇತಿ ಸೂತ್ರೇ ಯಸ್ಯಾತ್ಮತ್ವರೂಪೈಕಗುಣೋಪಾಸನಾಧಿ ಕಾರೀ ತಂ ಪ್ರತಿ ತಾವನ್ಮಾತ್ರಮೇವ ತತಃ ಪ್ರತಿಭಾತಿ ನಾನ್ಯತ್ ಇತ್ಯನ್ಯಯೋಗ-ವ್ಯವಚ್ಛೇದಾರ್ಥ ಏವಕಾರಃ। ತದಪ್ಯಾಹ–'ಆತ್ಮಶಬ್ದಾಚ್ಚ' ಇತಿ ಸೂತ್ರೇ ।

ಹೀಗೆ ಇಲ್ಲಿ ರಾಯರು 'ಏವ'ಕಾರದ ವಿವರಣೆಯನ್ನು ಅನೇಕ ಸೂತ್ರಗಳ ಸಾರಸಂಗ್ರಾಹಕವಾಗಿ ಮಾಡಿರುವುದು ಅಪೂರ್ವವಾಗಿದೆ.

## ವಿಸ್ತೃತದ ಸಂಕ್ಷೇಪ

'ಬ್ರಹ್ಮವಾ ಇದಮಗ್ರ ಆಸೀತ್'(3.5.4) ಎಂಬ ಮಂತ್ರಕ್ಕೆ ಜಗದ್ಗುರು ಶ್ರೀಮಧ್ವರ ಭಾಷ್ಯವು 30–40 ಪುಟಗಳಷ್ಟು ವಿಸ್ತೃತವೂ ವಿಮರ್ಶಾತ್ಮಕವೂ ಸಂದರ್ಭೋಚಿತ ಪರಕೀಯವ್ಯಾಖ್ಯಾನನಿರಾಕರಣಪರವೂ ಆಗಿದೆ. ಭಾಷ್ಯದ ಬೆಳಕಿನಲ್ಲಿ ಮೂಲಕ ಅರ್ಥವನ್ನು ರಾಯರು ಈ ಪ್ರಸಂಗದಲ್ಲಿ ವಿವರಿಸದಿರುವಲ್ಲಿ ಮಂದಾಧಿಕಾರಿಗಳಿಗೆ ಗೊಂದಲ, ಉದ್ವೇಗ ಸಹಜವಾಗುತ್ತಿತ್ತು. ಆದರೆ ಕರುಣಾಳುಗಳಾದ ರಾಯರು ಈ ಮಂತ್ರಖಂಡದ ಸಾರವನ್ನು ಹೀಗೆ ಸೆರೆಹಿಡಿದಿದ್ದಾರೆ.

ವಿಶ್ವಸೃಷ್ಟಿಯ ಮೊದಲು ಬ್ರಹ್ಮ ಒಬ್ಬನೇ ಇದ್ದನು. ಅವನು ತನ್ನ ಬಗ್ಗೆ ಹೀಗೆ ತಿಳಿದನು–'ನಾನು ಎಲ್ಲ ವಸ್ತುಗಳ ನಿಯಮನಕ್ಕಾಗಿ ಎಲ್ಲೆಡೆ ಇರುವ ಕಾರಣ ಯಾರಿಂದಲೂ ತ್ಯಾಜ್ಯನಲ್ಲ (ಅಹಂ), ಪೂರ್ಣನಾಗಿರುವೆ (ಬ್ರಹ್ಮ), ಎಲ್ಲ ಕಾಲದಲ್ಲೂ ಏಕರೂಪನಾಗಿರುವವನು (ಅಸ್ಮಿ). ಬ್ರಹ್ಮನಿಗಿಂತ ಬೇರೆಯಾವುದೂ ಪೂರ್ಣವಾಗಿಲ್ಲದ ಕಾರಣ ಅವನು ತನ್ನನ್ನೂ ಹಾಗೆ ತಿಳಿಯುವುದು ಸಮುಚಿತವಾಗಿದೆ.

'ಸದೇವ ಸೋಮ್ಯ ಇದಮಗ್ರ **ಆಸೀತ್**' 'ಆತ್ಮಾ ವಾ ಇದಮೇಕ ಏವ ಅಗ್ರ **ಆಸೀತ್**' ಇತ್ಯಾದಿ ಸ್ಥಳಗಳಲ್ಲಿರುವ ಅತೀತ ಕಾಲವನ್ನು ತಿಳಿಸುವ ಲಙ್ ಲಕಾರವಿದ್ದರೂ 'ಬ್ರಹ್ಮನು ಎಲ್ಲ ಕಾಲದಲ್ಲಿರುವನು' ಎಂದೇ ಅರ್ಥಮಾಡಿಕೊಳ್ಳಬೇಕು. ಮೂರು ಕಾಲ ವನ್ನೂ ತಿಳಿಸುವ ಲಕಾರ ಇಲ್ಲವಷ್ಟೆ! ಆದ್ದರಿಂದ ಅಸ್ತಿತ್ವ-ಪೂರ್ಣತೆ-ಸದಾ ಸ್ವೀಕಾರ್ಯತೆ (ಅಹೇಯತಾ) ಬ್ರಹ್ಮನ ನಿತ್ಯಧರ್ಮಗಳಾಗಿದ್ದು ಅವುಗಳನ್ನು ಬ್ರಹ್ಮನೇ ಸ್ವತಃ ಅನುಸಂಧಾನಗೈದನು.

ಅಥವಾ ಹೀಗೂ ಅರ್ಥಮಾಡಬಹುದು—ಬ್ರಹ್ಮ=ಪರಬ್ರಹ್ಮನು, ಅಗ್ರೇ=ಅನಾದಿ ಕಾಲದಿಂದಲೂ, ಆತ್ಮಾನಂ=ತನ್ನ ಸ್ವರೂಪವನ್ನು 'ಅಹಂ ಬ್ರಹ್ಮ ಅಸ್ಮಿ' ಇತ್ಯಾದಿಯಾಗಿ ಅವೇತ್= ತಿಳಿದಿರುತ್ತದೆ. ಈ ವಿವರಣೆಯಂತೆ ಅನಾದಿ ಕಾಲದ ಸತ್ತ್ವ-ಸ್ಥಿತಿಗಳು 'ಅಗ್ರ' ಪದದಿಂದಲೇ ವೇದ್ಯವಾಗುವವು.

ಹೀಗೆ ಬ್ರಹ್ಮಸ್ವರೂಪವನ್ನರಿತ ದೇವತೆಗಳು ಋಷಿಗಳು ಮನುಷ್ಯೋತ್ತಮರು ತಮ್ಮ ಉಪಾಸನೆಗೆ ಅನುಗುಣಾಗಿ ಪೂರ್ಣತೆಯನ್ನು ಪಡೆದರು.

ವಾಮದೇವ ಋಷಿಯ ಅನುಭವ(ದರ್ಶನ)ವನ್ನು ಉಪನಿಷತ್ತು ದಾಖಲಿಸಿದೆ. ಋಷಿ ವಾಮದೇವನು ಧ್ಯಾನದಲ್ಲಿ ಈ ಸತ್ಯವನ್ನು ಕಂಡನು—

ನನ್ನೊಳಗಿರುವ ಭಗವಂತನು ಜ್ಞಾನರೂಪಿಯಾಗಿದ್ದು ಮನುವಿನಲ್ಲೂ ನಿಯಾಮಕನಾಗಿರುವನು. ಜ್ಞಾನಿಗಳಿಂದ ಹೊಂದಲ್ಪಡುವ ಕಾರಣ ಸೂರ್ಯನೆನಿಸಿದ್ದು ಸೂರ್ಯನಲ್ಲಿರುವನು. ಕಾಡಿನಲ್ಲಿರುವ ಸುಜನರಿಂದ ಸೇವ್ಯನಾಗಿ ಕಕ್ಷೀವಾನ್ ಎಂಬ ಋಷಿಯಲ್ಲೂ ನಿಯಾಮಕನಾಗಿರುವನು. (ಅಹಂ ಮನುರಭವಂ ಸೂರ್ಯಶ್ಚ ಅಹಂ ಕಕ್ಷೀವಾನ್ ಋಷಿರಸ್ಮಿ ವಿಪ್ರಃ, ಋಗ್ವೇದ 3.6.15)

ಇದರಿಂದ 'ಅಹಂ'ಶಬ್ದವು ಕೇವಲ ಈ ಜೀವವಾಚಿಯಾಗಿರದೇ ಒಳಗಿರುವ ಭಗವಂತನನ್ನು ತಿಳಿಸುತ್ತದೆ. ಭಿನ್ನಭಿನ್ನ ವ್ಯಕ್ತಿಗಳಲ್ಲಿ ಅಂತರ್ಯಾಮಿಯಾಗಿರುವ ಭಗವಂತನಲ್ಲಿ ಅದ್ವೈತವನ್ನು ಬೋಧಿಸುತ್ತದೆ. ಜೀವ-ಬ್ರಹ್ಮರ ಅಭೇದವನ್ನು ಈ ವಾಕ್ಯವು ಬೋಧಿಸುವುದಿಲ್ಲ. ಈ ಅರ್ಥದಲ್ಲಿಯೇ 'ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್' (ಬ್ರ.ಸೂ. 1.1.30) ಎಂಬ ಸೂತ್ರ ಮೈದಳೆದಿದೆ.

ಹೀಗೆ ಹಿಂದೆ ತಿಳಿಸಿದಂತೆ ಉಪಾಸನೆಗೈವ ಯಾವುದೇ ಕಾಲದ ಅಧಿಕಾರಿಗೂ ದೇವತೆಗಳು ಶ್ರೇಯೋಮಾರ್ಗದಲ್ಲಿ ತಡೆಯೊಡ್ಡದೇ ಹರಿಶರಣನಾದ ಕಾರಣ ತಮ್ಮ ಪ್ರೀತಿಯ ಹೊಳೆ ಹರಿಸಿ ಉದ್ಧರಿಸುವರು.

ಇನ್ನು ಉಪನಿಷತ್ತು ಅನ್ಯಥೋಪಾಸಕರ ನಿಂದನೆಗೈಯುತ್ತಿದೆ–

ಜೀವವಿಲಕ್ಷಣನಾದ ವಿಷ್ಣುವನ್ನು 'ವಿಷ್ಣುವೇ ಬೇರೆ, ಅಹೇಯತ್ವಾದಿ ಗುಣವುಳ್ಳವನೇ ಬೇರೆ, ವಿಷ್ಣುವಲ್ಲ' ಎಂದು ಯಾರು ಉಪಾಸಿಸುವನೋ ಅವನು ಸತ್ಯ ತಿಳಿಯದ 'ಪಶು'ವಾಗಿರುವನು.

ಅಥವಾ 'ಅಹಂ' 'ಅಸ್ಮಿ' ಪದಗಳಿಂದ ಬೋಧ್ಯ ಗುಣವುಳ್ಳವನು ಇನ್ನೊಬ್ಬ ದೇವತೆ, ವಿಷ್ಣುವಿನಲ್ಲಿ ಈ ಗುಣಗಳಿಲ್ಲವೆಂದು ವಿಷ್ಣುವಿನ ಉಪಾಸನೆಯನ್ನು ತ್ಯಜಿಸಿ ಬೇರೆ ದೇವತೆಯನ್ನೇ ಉಪಾಸಿಸುವನೋ ಅವನು ಅಜ್ಞಾನಿಯಾದ 'ಪಶು' ಎನಿಸುವನು. ಇಂತಹ ಉಪಾಸಕರು ದೇವತೆಗಳಿಗೆ ಎಂದೂ ಪ್ರಿಯರಾಗಲಾರರು. ಮಾನವರಿಗೆ ಭೋಜನ ಪದಾರ್ಥಗಳನ್ನು ದೊರಕಿಸಿ ಕೊಡುವ ಹಸು ಮುಂತಾದ ಪಶುಗಳು ಪ್ರಿಯವಾಗುವಂತೆ, ಜ್ಞಾನಸಂಪತ್ತಿಯುಳ್ಳ ಮಾನವರು ದೇವತೆಗಳಿಗೆ ಪ್ರಿಯರೆನಿಸುವರು.

ಇದು ಪಠ್ಯಭಾಗದ ಸಾರ. ರಾಯರ ಈ ವಿವರಣೆ ಭಾಷ್ಯಸಾಗರವನ್ನು ಕಡೆದು ನವನೀತ ತೆಗೆದಂತಿದೆ. ಪ್ರಸಕ್ತಾನುಪ್ರಸಕ್ತ ವಿಷಯಗಳನ್ನು ಬಿಟ್ಟು ಮೂಲದ ಭಾವವನ್ನು ಸ್ಫುಟ ಪಡಿಸುವಲ್ಲಿ ರಾಯರು ಅಗ್ರಗಣ್ಯರು.

**ವಿರೋಧಪರಿಹಾರ–ಮುಕ್ತರಿಗೆ ಅಮುಕ್ತರು ನಿಯಾಮಕರಲ್ಲ**

'ಪ್ರಾಣಾಃ ಅಮೃತಾಃ ಆವಿಶಂತಿ' (3.6.17) ಎಂಬಲ್ಲಿ ಮುಕ್ತರಲ್ಲಿ ಪ್ರಾಣನು ನಿಯಾಮಕನೆಂದು ಹೇಳಲ್ಪಟ್ಟಿದೆ. ಇದರಿಂದ ಜೀವೋತ್ತಮನೂ ಅತಿಸಮರ್ಥನೂ ಆದ ಮುಖ್ಯಪ್ರಾಣನು ಇತರ ದೇವತೆಗಳಿಂದ ನಿಯಮಿಸಲಾಗದ ಮುಕ್ತ ಪ್ರದೇಶದಲ್ಲೂ ಇದ್ದು ನಿಯಮನ ಮಾಡುತ್ತಾನೆ ಎಂಬ ಅರ್ಥ ದೊರಕುವುದು. ಇದು ಶಾಸ್ತ್ರವಿರುದ್ಧ ವಾಗಿದೆ. ಮುಕ್ತಗಮ್ಯ ಪ್ರದೇಶದಲ್ಲಿ ಅಮುಕ್ತರು ಯಾರೂ ಹೋಗುವಂತಿಲ್ಲ. ಆದ್ದರಿಂದ ಪ್ರಾಣನ ನಿಯಮನವನ್ನು ಮುಕ್ತಿಯಲ್ಲಿ ಉಪನಿಷತ್ತು ವರ್ಣಿಸಿದರೂ ಇಲ್ಲಿ ಪ್ರಾಣ ಶಬ್ದದಿಂದ ಚತುರ್ಮುಖನನ್ನು ತೆಗೆದುಕೊಳ್ಳಬೇಕೆನ್ನುತ್ತಾರೆ. ಶ್ರೀರಾಯರು–'ಅತ್ರ ಮುಕ್ತೇ ಜೀವೇ ಪ್ರಾಣಪ್ರವೇಶೋಕ್ತಿರ್ವಾಯೋರುಚ್ಯಮಾನಾ ವಿರಿಂಚಸ್ಯೈವ ರೂಪಾಂ–ತರೇಣೇತಿ ಜ್ಞೇಯಮ್'

ಈ ವಿವರಣೆಯ ಮೂಲವನ್ನು ಅನುವ್ಯಾಖ್ಯಾನದಲ್ಲಿ ಕಾಣಬಹುದು–

ಉಮಾಗಿರೀಶಾವಪಿ ಭಾರತೀರಾವಿತಿ ಸ್ಮ ವಾಗ್ ವೇದಗತಾ ಬ್ರವೀತಿ ।
ಅಹೀಂದ್ರಪತ್ನೀ ಮಹಿಪಂ ವಿರಿಂಚಪತ್ನೀಂ ವಿರಿಂಚಂ ಚ ವಿಮುಕ್ತಿಕಾಲೇ ॥

ಮುಕ್ತರ ಪ್ರಕರಣದಲ್ಲಿ ಬರುವ 'ಉಮಾ-ಗಿರೀಶ' ಮತ್ತು 'ವಾಯು-ಭಾರತಿ' ಎಂಬ ಪದಗಳಿಂದ ಕ್ರಮವಾಗಿ 'ವಾರುಣಿ-ಶೇಷ' ಮತ್ತು 'ಸರಸ್ವತಿ-ಚತುರ್ಮುಖ'ರನ್ನು ತೆಗೆದುಕೊಳ್ಳಬೇಕು ಎಂಬುದಾಗಿ ಮೇಲಿನ ವಾಕ್ಯದ ಅರ್ಥವಾಗಿದೆ. ಹೀಗೆ ಮೂಲವನ್ನು ಅರ್ಥಮಾಡಿಕೊಳ್ಳುವಾಗ ಬರುವ ಶಾಸ್ತ್ರವಿರೋಧವನ್ನು ಪರಿಹರಿಸಿ ಅದರ ಶುದ್ಧ ಭಾವವನ್ನು ರಾಯರು ಎಲ್ಲೆಡೆ ತಿಳಿಸಿದ್ದಾರೆ.

**ದೇವತಾಪರವಾದ ಅರ್ಥ—ಮಿತಿ**

ಯಾಜ್ಞವಲ್ಕ್ಯರು ಮೈತ್ರೇಯಿಗೆ ಉಪದೇಶಿಸುವಾಗ ಕೆಲವು ವಾಕ್ಯಗಳಿವೆ-''ಸ ಹೋವಾಚ ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ.... ವಿತ್ತಸ್ಯ ಕಾಮಾಯ ವಿತ್ತಾಃ ಪ್ರಿಯಂ ಭವಂತಿ... ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ.....''

ಭಾಷ್ಯವಿಲ್ಲದ ಈ ವಾಕ್ಯಖಂಡದ ಭಾಗವನ್ನು ರಾಯರು ಹೃದಯಂಗಮವಾಗಿ ವ್ಯಾಖ್ಯಾನಿಸಿದ್ದಾರೆ. ಯಾರಿಗೆ ಯಾರೂ ವೈಯಕ್ತಿಕ ಇಚ್ಛೆಯಂತೆ ಪ್ರಿಯರಾಗುವುದಿಲ್ಲ. ಪರಸ್ಪರ ಪ್ರೀತಿ ಬೆಳೆಯಲು ಶ್ರೀಹರಿಯ ಇಚ್ಛೆಯೇ ಅಂತಿಮ ಎಂಬುದು ಈ ಭಾಗದ ಮಥಿತಾರ್ಥ. ಇಲ್ಲಿ ಜೀವನಿಗೆ ಹಣ ಪ್ರಿಯವೆನಿಸಲು, ಅವನ ಮತ್ತು ಭಗವಂತನ ಇಚ್ಛೆಯ ನಡುವೆ ನಿಯಾಮಕವಾದ ಆಯಾ ವಸ್ತುಗಳ ಅಭಿಮಾನಿ ದೇವತೆಗಳ ಇಚ್ಛೆಯ ಪಾತ್ರ ಮರೆಯಲಾಗದು. ವೇದದಲ್ಲಿ ಬರುವ 'ಆಕಾಶ' ಮೊದಲಾದ ಶಬ್ದಗಳು, ಭೂತ-ಭೂತಾಭಿಮಾನಿ-ಅವನ ದೇಹ-ನಿಯಾಮಕ ಹರಿ, ಹೀಗೆ ನಾಲ್ಕು ವಸ್ತುಗಳನ್ನು ಭಿನ್ನ ಭಿನ್ನ ಸ್ತರದಲ್ಲಿ ಬೋಧಿಸುವವು ಎಂಬುದಾಗಿ ಅನುವ್ಯಾಖ್ಯಾನ ಗ್ರಂಥವು ತಿಳಿಸುತ್ತದೆ. ಈ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ಬರುವ 'ವಿತ್ತ' ಮೊದಲಾದ ಶಬ್ದಗಳಿಂದ ಅದರ ಅಭಿಮಾನಿ ದೇವತೆಗಳನ್ನು ತೆಗೆದುಕೊಂಡು, ಅವರ ಇಚ್ಛೆಗೂ ಶ್ರೀಹರಿಯ ಇಚ್ಛೆ ಪ್ರೇರಕ ಹಾಗೂ ಅಂತಿಮ ಎಂಬ ಸಂಗತಿಯನ್ನು ರಾಯರು ವಿಶ್ಲೇಷಿಸಿದ್ದಾರೆ. ರಾಯರ ವ್ಯಾಖ್ಯಾನದಂತೆ ಈ ಭಾಗದ ಅರ್ಥ ಹೀಗಿದೆ—

ಸಂಪತ್ತಿನ ಅಭಿಮಾನಿ ದೇವತೆಯಾದ ಕುಬೇರನ ಇಚ್ಛೆಯಿಂದ ಸಂಪತ್ತು ನಮಗೆ ಪ್ರಿಯವೆನಿಸದು. ಶ್ರೀಹರಿಯ ಇಚ್ಛೆಯೇ ಸಂಪತ್ತು ಪ್ರಿಯವೆನಿಸಲು ಪ್ರಧಾನ ಕಾರಣ. ಇದರಂತೆ ಬ್ರಾಹ್ಮಣಜಾತ್ಯಭಿಮಾನಿ ಚತುರ್ಮುಖನ ಇಚ್ಛೆಯಂತೆ ಬ್ರಹ್ಮಜಾತಿ ಪ್ರಿಯವೆನಿಸದು. ಶ್ರೀಹರಿಯ ಇಚ್ಛೆಯಿಂದಲೇ ಅದು ಪ್ರಿಯವೆನಿಸುವುದು. ಇದರಂತೆ ಕ್ಷತ್ರಜಾತ್ಯಭಿಮಾನಿ ವಾಯುವಿನ ಇಚ್ಛೆಯಂತೆ ಕ್ಷತ್ರಜಾತಿ ಪ್ರಿಯವೆನಿಸದು. ಅಂತಿಮವಾಗಿ ಹರಿಯ ಇಚ್ಛೆ ಇದ್ದಲ್ಲಿ ಮಾತ್ರವೇ ಅದು ಪ್ರಿಯವೆನಿಸುವುದು. ಹೀಗೆ ಸಮಗ್ರ ಪ್ರಕರಣ ದಲ್ಲಿ ಬರುವ ಪದಗಳನ್ನು ಅಭಿಮಾನಿ ದೇವತಾಪರವಾಗಿ ವ್ಯಾಖ್ಯಾನಿಸಿದ ರಾಯರ ಕೌಶಲ ಅನುವ್ಯಾಖ್ಯಾನ-ಋಗ್ಭಾಷ್ಯಗಳ ವಿವರವನ್ನು ನೆನಪಿಗೆ ತರುತ್ತದೆ.

## ಪದಗಳಿಗೆ ವಿಶಿಷ್ಟ ವ್ಯಾಖ್ಯಾನ

ಈ ಪ್ರಸಂಗದಲ್ಲಿ ಶ್ರೀರಾಯರು ಶ್ರವಣ-ಮನನ-ನಿದಿಧ್ಯಾಸನ ಪದಾರ್ಥವನ್ನು ವಿವರಿಸಿ ಅವುಗಳ ಪಾತ್ರವನ್ನು ವಿವರಿಸುತ್ತಾರೆ.

ಶ್ರವಣವೆಂದರೆ, ಕಿವಿಗೆ ಶಬ್ದ ತರಂಗಗಳ ಸ್ಪರ್ಶವಾಗುವುದಲ್ಲ. ಗುರೂಪದೇಶವನ್ನು ಲಕ್ಷ್ಯಗೊಟ್ಟು ಕೇಳುವುದರಿಂದ ಬರುವ ವಾಕ್ಯಾರ್ಥಜ್ಞಾನವೇ 'ಶ್ರವಣ'ವೆನಿಸುವುದು. 'ಮನನ'ವೆಂದರೆ ಶ್ರವಣ ಮಾಡಿದ ವಿಷಯದಲ್ಲಿ ಯುಕ್ತಿಯ ಅನುಸಂಧಾನ, ಆಳವಾದ ವಿಮರ್ಶೆ. ನಿರಂತರ ಚಿಂತನೆ ಧ್ಯಾನವೆನಿಸುವುದು. ಭಗವಂತನ ಸಾಕ್ಷಾತ್ಕಾರವಾಗಲು ಧ್ಯಾನವು ನೇರ ಕಾರಣವಾಗಿದೆ. ಶ್ರವಣಮನನಗಳು ಧ್ಯಾನಪ್ರತಿಬಂಧಕವಾದ ಅಜ್ಞಾನ-ಸಂಶಯ-ವಿಪರ್ಯಯಗಳನ್ನು ತೊಡೆದು ಹಾಕುವುವು. ಇದನ್ನು 'ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ ಪೃಥಗ್ಯಪ್ರತಿಬಂಧಃ ಫಲಮ್'(ಬ್ರ.ಸೂ. 3.3.43)ಎಂಬ ಸೂತ್ರವು ತಿಳಿಸುತ್ತದೆ. ಕರ್ಮದೇವತೆಗಳ ಜ್ಞಾನದಿಂದ ದೊರಕುವ ಫಲವು ಆತ್ಮಜ್ಞಾನದಿಂದ ಅನಾಯಾಸವಾಗಿ ಲಭಿಸವುದು. ಇದಲ್ಲದೇ ಆತ್ಮಜ್ಞಾನದಿಂದ ಇನ್ನೂ ಹೆಚ್ಚಿನ ಮುಕ್ತಿ ಫಲವಿದೆ. ಈ ಹಿನ್ನೆಲೆಯಲ್ಲಿ ಆತ್ಮಜ್ಞಾನದಿಂದ ಎಲ್ಲ ಫಲ ದೊರಕಿದಂತೆ ಎಂಬುದಾಗಿ ಉಪನಿಷತ್ತು ಆತ್ಮಜ್ಞಾನಸಂಪಾದನೆಯ ಆವಶ್ಯಕತೆಯನ್ನು ಒತ್ತಿ ಹೇಳುತ್ತದೆ. ಹೀಗೆ ರಾಯರು ಪದಗಳಿಗೆ ಅಪೂರ್ವ ವ್ಯಾಖ್ಯಾನ ನೀಡುತ್ತಾರೆ.

## ಗ್ರಂಥಾಂತರದಲ್ಲಿ ಬಂದ ಭಿನ್ನ ವ್ಯಾಖ್ಯಾನ ವಿವರಣೆ

ಉಪನಿಷತ್ತಿನ ಪಠ್ಯಭಾಗದ ವ್ಯಾಖ್ಯಾನದ ಜೊತೆಗೆ ಇದೇ ಮಂತ್ರಭಾಗವನ್ನು ಬೇರೆ ಗ್ರಂಥಗಳಲ್ಲಿ ಭಿನ್ನ ದೃಷ್ಟಿಕೋನದಿಂದ ವ್ಯಾಖ್ಯಾನಿಸಿದಲ್ಲಿ ಅದನ್ನು ಜಿಜ್ಞಾಸುಗಳ ಸೌಕರ್ಯಕ್ಕೆ ಪೂರಕವಾಗಿ ಸೇರಿಹಿಡಿಯುವುದು ರಾಯರ ವೈಶಿಷ್ಟ್ಯವಾಗಿದೆ.

ಕಹೋಲ ಬ್ರಾಹ್ಮಣದಲ್ಲಿ(5.5.) ''ಭಿಕ್ಷಾಚರ್ಯಂ ಚರಂತಿ....ತಸ್ಮಾದ್ ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್....ತತೋಽನ್ಯದಾರ್ತಮ್ ।'' ಇತ್ಯಾದಿ ವಾಕ್ಯಗಳಿವೆ. ಇದಕ್ಕೆ ರಾಯರು ಬೃಹದ್‌ಭಾಷ್ಯದ ಬೆಳಕಿನಲ್ಲಿ ಮೊದಲು ವ್ಯಾಖ್ಯಾನ ನೀಡುವರು.

ಗುಣಪೂರ್ಣನಾದ ಪರಮಾತ್ಮನ ಸಾಕ್ಷಾತ್ಕಾರ ಪಡೆದವರು ಭೋಗವಸ್ತುಗಳ ಬಗ್ಗೆ ಹಾಗೂ ಸ್ವರ್ಗಾದಿ ಲೋಕಗಳ ಬಗ್ಗೆ ಆಸಕ್ತಿ ತೊರೆದು ಪರಬ್ರಹ್ಮನನ್ನು ಹೊಂದುತ್ತಾರೆ. ಅನಂತರ ಪರಮಾತ್ಮನ ಸುಖಕ್ಕಿಂತ ಅತ್ಯಲ್ಪವಾದ ತಮ್ಮ ಯೋಗ್ಯತಾನುಗುಣವಾದ ಸ್ವರೂಪ ಸುಖವನ್ನು ಅನುಭವಿಸುತ್ತಾರೆ.

ಧನ ಮತ್ತು ಸಂತತಿಯ ಇಚ್ಛೆ ಲೌಕಿಕ ಪದಾರ್ಥಕಾಮನಾರೂಪವಾಗಿದ್ದು ಸ್ವರ್ಗೇಚ್ಛೆಯು ಅಲೌಕಿಕ ಕಾಮನಾರೂಪವಾಗಿದ್ದು ವೈಷಯಿಕ ಸುಖಕಾರಣವಾಗಿ,

